


## ಹಂಪಿ ಕನ್ನಡ ವಿಶ್ವವಿದ್ಯಾಲಯ



# "ಡಾ.ಡಿ.ಎನ್ ಶಂಕರಭಟ್ ಮತ್ತು ಕನ್ನಡ ಬರಹ"

ಹಂಪಿ ಕನ್ನಡ ವಿಶ್ವವಿದ್ಯಾಲಯ

ಎಂ.ಫಿಲ್ ಪ್ರಬಂಧ

ಸಂಶೋಧಕರು: ವರಲಕ್ಷ್ಮೀ.ಆರ್

ನೋಂದಣಿ ಸಂಖ್ಯೆ :೧೪೧೦೦೦೧೦೩೦೦೭೪

KVMB/K007

ಮಾರ್ಗದರ್ಶಕರು:

ಡಾ. ಅನ್ನದಾನೇಶ್.ಬಿ.ಎ

ಕನ್ನಡ ವಿಭಾಗದ ಮುಖ್ಯಸ್ಥರು

ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಮಹಿಳಾ ವಿದ್ಯಾಲಯ,

ಮಲ್ಲೇಶ್ವರಂ, ಬೆಂಗಳೂರು - ೫೬೦೦೧೨

ಕಾವ್ಯ ಮಂಡಲ

ಜೆ.ಪಿ.ನಗರ, ಬೆಂಗಳೂರು - ೫೬೦೦೭೮




1221

೨೦೧೪-೧೫

1221





# ಹಂಪಿ ಕನ್ನಡ ವಿಶ್ವವಿದ್ಯಾಲಯ



ಶಿರಿಗನ್ನಡ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

## " ಡಾ.ಡಿ.ಎನ್ ಶಂಕರಭಟ್ ಮತ್ತು ಕನ್ನಡ ಬರಹ"

ಹಂಪಿ ಕನ್ನಡ ವಿಶ್ವವಿದ್ಯಾಲಯ
ಎಂ.ಫಿಲ್ ಪ್ರಬಂಧ

**ಸಂಶೋಧಕರು: ವರಲಕ್ಷ್ಮೀ.ಆರ್**
**ನೋಂದಣಿ ಸಂಖ್ಯೆ :೧೪೧೦೦೧೦೩೦೦೭೪**

KVMB/K007

**ಮಾರ್ಗದರ್ಶಕರು:**
**ಡಾ. ಅನ್ನದಾನೇಶ್.ಬಿ.ಎ**
ಕನ್ನಡ ವಿಭಾಗದ ಮುಖ್ಯಸ್ಥರು
ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಮಹಿಳಾ ವಿದ್ಯಾಲಯ,
ಮಲ್ಲೇಶ್ವರಂ, ಬೆಂಗಳೂರು – ೫೬೦೦೧೨

**ಕಾವ್ಯ ಮಂಡಲ**
ಜೆ.ಪಿ.ನಗರ, ಬೆಂಗಳೂರು – ೫೬೦೦೭೮





೨೦೧೪–೧೫

## ಅಭ್ಯರ್ಥಿಯ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ೨೦೧೪-೧೫ನೇ ಸಾಲಿನಲ್ಲಿ **"ಡಾ.ಡಿ.ಎನ್ ಶಂಕರಭಟ್ ಮತ್ತು ಕನ್ನಡ ಬರಹ"** ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು **ಡಾ. ಅನ್ನದಾನೇಶ್.ಬಿ.ಎ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಪ್ರಬಂಧವು ನನ್ನ ಸ್ವಂತ ಬರವಣಿಗೆಯಾಗಿದ್ದು, ಇದರ ಯಾವುದೇ ಭಾಗವನ್ನು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೆಂಗಳೂರು

ದಿನಾಂಕ : ೨೯-7-೨015

ಸಂಶೋಧನಾ ವಿದ್ಯಾರ್ಥಿ

ವರಲಕ್ಷ್ಮೀ.ಆರ್

## ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ೨೦೧೪–೧೫ನೇ ಸಾಲಿನಲ್ಲಿ **"ಡಾ.ಡಿ.ಎನ್ ಶಂಕರಭಟ್ ಮತ್ತು ಕನ್ನಡ ಬರಹ"** ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ವರಲಕ್ಷ್ಮೀ.ಆರ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿರುತ್ತಿದ್ದಾರೆ.

ಈ ಪ್ರಬಂಧವನ್ನು ಈವರೆಗೆ ಬೇರೆಲ್ಲೂ ಪ್ರಕಟಿಸಿರುವುದಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ: ಬೆಂಗಳೂರು
ದಿನಾಂಕ : ೨೧-7-೨೦15

B. A. Annadanesha.

ಡಾ. ಬಿ.ಎ. ಅನ್ನದಾನೇಶ್
ಮುಖ್ಯಸ್ಥರು, ಕನ್ನಡ ವಿಭಾಗ
ಮಹಾರಾಣಿ ಲಕ್ಷ್ಮೀಅಮ್ಮಣ್ಣಿ ಮಹಿಳಾ ಪದವಿ ಕಾಲೇಜು
ಮಲ್ಲೇಶ್ವರಂ, ಬೆಂಗಳೂರು – 560 012

ಮಾರ್ಗದರ್ಶಕರು:
ಡಾ. ಅನ್ನದಾನೇಶ್.ಬಿ.ಎ
ಕನ್ನಡ ವಿಭಾಗದ ಮುಖ್ಯಸ್ಥರು
ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಮಹಿಳಾ ವಿದ್ಯಾಲಯ,
ಮಲ್ಲೇಶ್ವರಂ, ಬೆಂಗಳೂರು – ೫೬೦೦೧೨

## "ಡಾ.ಡಿ.ಎನ್ ಶಂಕರಭಟ್ ಮತ್ತು ಕನ್ನಡ ಬರಹ"

*ಎಲ್ಲರ ಕನ್ನಡದ ಬರಿಗೆಮನೆ*

ಅ ಆ ಇ ಈ ಉ ಊ ಎ ಏ ಒ ಓ ಅಂ

ಕ ಗ

ಚ ಜ

ಟ ಡ ಣ

ತ ದ ನ

ಪ ಬ ಮ

ಯ ರ ಲ ವ ಶ ಸ ಹ ಳ



# ಪರಿವಿಡಿ

ಪುಟ ಸಂಖ್ಯೆ

# ಅಧ್ಯಾಯ – ೧

## ಪೀಠಿಕೆ, ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ನಾಡೋಜ ಡಾ॥ ಡಿ.ಎನ್ ಶಂಕರ್‌ಭಟ್ ಅವರು ಪ್ರಪಂಚದ ಪ್ರಸಿದ್ಧ ನುಡಿಯರಿಗರು ಮದ್ರಾಸ್ ವಿಶ್ವವಿದ್ಯಾಲಯದಿಂದ ಸಂಸ್ಕೃತದಲ್ಲಿ ಎಂ.ಎ. ಹಾಗೂ ಪುಣೆ ವಿಶ್ವವಿದ್ಯಾಲಯದಿಂದ ನುಡಿಯರಿಮೆಯಲ್ಲಿ ಪಿ.ಎಚ್.ಡಿ. ಪಡೆದಿರುವ ಭಟ್ಟರು ಅಮೇರಿಕಾದ ಸ್ಟ್ಯಾನ್ಪೋರ್ಡ್ ವಿಶ್ವವಿದ್ಯಾಲಯ ಆಸ್ಟ್ರೇಲಿಯಾದ ಲಾಟ್ರೋಬೆ ವಿಶ್ವವಿದ್ಯಾಲಯ ಬೆಲ್ಜಿಯಂ ದೇಶದ ಅಂಟೆರೆಪ್ ವಿಶ್ವದ್ಯಾಲಯ, ಜರ್ಮನಿಯ ಮ್ಯಾಕ್ಸ್ ಪ್ಲಾಂಕ್ ಇನ್ಸ್ಟಿಟ್ಯೂಟ್ ನಂತಹ ಜಗತ್ತಿನ ಪ್ರಮುಖ ವಿಶ್ವವಿದ್ಯಾಲಯಗಳಲ್ಲಿ ಹಾಗೂ ಭಾರತೀಯ ಭಾಷಾ ಸಂಸ್ಥಾನ ಮಣಿಪುರ ವಿಶ್ವವಿದ್ಯಾಲಯ ಪುಣೆಯಲ್ಲಿರುವ ಡೆಕ್ಕನ್ ಕಾಲೇಜ್ ಹೀಗೆ ಹಲವಾರು ಕಡೆ ಕಲಿಸುಗರಾಗಿ, ಅರಕೆಗಾರರಾಗಿ, ಕಾರ್ಯನಿರ್ವಹಿಸಿದ್ದಾರೆ.

ನುಡಿಯರಿಮೆಯ ಬಗ್ಗೆ ಬರೆದಿರುವ ಅವರ ಹತ್ತಾರು ಪುಸ್ತಕಗಳು ಮತ್ತು ಸಂಶೋಧನೆಗಳು ಪ್ರಸಿದ್ಧವಾಗಿದೆ ಕನ್ನಡ ನುಡಿಯ ಬಗ್ಗೆ ಶಂಕರಭಟ್ಟರು ಹಲವು ವರ್ಷಗಳ ಕಾಲ ಸಂಶೋಧನೆ ನಡೆಸಿದ್ದು ಇವುಗಳ ಆಧಾರದ ಮೇಲೆ ಹಲವು ಪುಸ್ತಕಗಳನ್ನು ಬರೆದಿದ್ದಾರೆ ಕನ್ನಡವನ್ನು ಹೊಸದಾದ ರೂಪದಲ್ಲಿ ಬರೆಯುವುದನ್ನೂ ತಿಳಿಸಿದ್ದಾರೆ.

ಹೀಗೆ ಡಿ.ಎನ್. ಶಂಕರಭಟ್ಟರು ಎಂಬ ನುಡಿಯರಿಗರು ಕನ್ನಡ ಭಾಷೆಯ ಕಲಿಕೆ ಹಾಗೂ ಅದರ ಜೀವಂತಿಕೆಗಾಗಿ ಹಲವಾರು ಸಂಶೋಧನೆಗಳನ್ನು ಮಾಡುತ್ತಿದ್ದಾರೆ. ಅವರು ಕನ್ನಡ ಬರಹ ಹಾಗೂ ಕ್ಲಿಷ್ಟವಾದ ಅಕ್ಷರಗಳ ಉಚ್ಛಾರಣೆ ಕಷ್ಟವಾಗುವುದರಿಂದ ೪೮ ಅಕ್ಷರಗಳ ಬದಲಿಗೆ ೩೨ ಅಕ್ಷರಗಳನ್ನು ಬಳಸಿ ಮಕ್ಕಳಿಗೆ ಕನ್ನಡ ಭಾಷೆಯನ್ನು ಕಲಿಸಬೇಕೆಂಬ ವಾದವನ್ನು ಪ್ರತಿಪಾದಿಸುತ್ತಾರೆ.

ಕನ್ನಡ ಭಾಷೆಗೆ ಎರಡು ಸಾವಿರ ವರ್ಷಗಳ ಇತಿಹಾಸವಿದೆ ಎಂದು ಹೇಳುವ ನುಡಿಗರಿಗರ ವಾದವನ್ನು ಒಪ್ಪುತ್ತಾರೆ. ಆದರೆ ಬರಹ ಭಾಷೆಗೆ ಒರತು ಆಡು ಭಾಷೆಗೆ ಅಲ್ಲ, ಎಂಬುದು ಇವರ ವಾದವಾಗಿದೆ ಏಕೆಂದರೆ ಆಡು ಭಾಷೆಯ ಸೊಲ್ಲುಗಳುಆಡಿದ ಕೂಡಲೇ ಮರೆಯಾಗುವಂತಹದು ಆದರೆ ಬರಹದ ಭಾಷೆಯನ್ನು ತಲೆಮಾರಿನಿಂದ ತಲೆಮಾರಿಗೆ ಕೊಂಡೊಯ್ಯಲು ಹಲವಾರು ಭಾಷೆಗಳಿಂದ ಪದಗಳನ್ನು ಎರವಲಾಗಿ

ಪಡೆದಿರುತ್ತಾರೆ. ಹಾಗೆಯೇ ಸಂಸ್ಕೃತ ಹಾಗೂ ಇನ್ನಿತರ ಭಾಷೆಗಳ ಪ್ರಭಾವಕ್ಕೆ ಒಳಗಾದ ಕನ್ನಡ ಭಾಷೆಯಲ್ಲಿ ಕನ್ನಡ ಭಾಷೆಗಿಂತ ಬೇರೆ ಭಾಷೆಯ ವ್ಯಾಕರಣ ಹಾಗೂ ಪದಗಳೇ ಹೆಚ್ಚಾಗಿರುವುದರಿಂದ ಕನ್ನಡ ಭಾಷೆಯಲ್ಲಿನ ಅಕ್ಷರಗಳನ್ನು ಬಳಸಿ ಹೊಸ ಪದಗಳನ್ನು ಕಟ್ಟುವ ಬಗೆಯನ್ನು ವಿವರಿಸಿದ್ದಾರೆ.

ಜಗತ್ತಿನ ಜೀವರಾಶಿಗಳಲ್ಲಿ ಮಾನವ ಪ್ರಾಣಿಗಳಿಗೆ ಮಾತ್ರ ಭಾಷೆಯನ್ನಾಡುವ ಕೌಶಲ್ಯವನ್ನು ಪಡೆದಿದ್ದಾನೆ. ಇನ್ನಿತರ ಪ್ರಾಣಿ ಪಕ್ಷಿಗಳಿಗೆ ನಾನಾ ಬಗೆಯ ಧ್ವನಿಗಳ ಮೂಲಕ ನಿರ್ದಿಷ್ಟವಾದ ಹಾವಭಾವಗಳನ್ನು ವ್ಯಕ್ತಪಡಿಸುವ ಕೌಶಲ್ಯವಿದ್ದರೂ ತಾವು ನೋಡಿದ ಅಥವಾ ತಿಳಿದ ಯಾವುದೇ ದೃಶ್ಯಗಳನ್ನು ಘಟನೆಗಳನ್ನು ಮತ್ತು ವಿಷಯಗಳನ್ನು ವ್ಯವಸ್ಥಿತವಾದ ಧ್ವನಿ ಸಂಕೇತಗಳ ಮೂಲಕ ಹೇಳುವ ಸಾಮರ್ಥ್ಯವಿಲ್ಲ.

ಮಾನವನಿಗೆ ಭಾಷೆಯ ಮೂಲಕ ಹಿಂದಿನ – ಇಂದಿನ ಮುಂದಿನ ವಿಷಯಗಳೆಲ್ಲಾವನ್ನು ಮತ್ತು ಕಂಡ ಕಲ್ಪಿತ ಸಂಗತಿಗಳನ್ನು ಹೇಳಬಲ್ಲ ಸಾಮರ್ಥ್ಯವಿದೆ ಈ ರೀತಿಯ ಸಾಮರ್ಥ್ಯ ಉಸಿರಾಟದಂತೆ ಮಾನವನಿಗೆ ಹುಟ್ಟಿನಿಂದಲೇ ಬಂದಿದೆ ಭಾಷೆಯನ್ನು ಆಡುವ ಸಾಮರ್ಥ್ಯವನ್ನು ಪೂರಕವಾಗಿ ಮಾನವನು ಗಳಿಸಿಕೊಂಡಿದ್ದಾನೆ.

ಜನ ಸಮುದಾಯಗಳ ಸಾಮಾಜಿಕ ವ್ಯವಹಾರಗಳಲ್ಲಿ ನಿತ್ಯ ಬಳಕೆಯಲ್ಲಿರುವ ಭಾಷೆಗಳಲ್ಲಿ ಕಾಲದಿಂದ ಕಾಲಕ್ಕೆ ಉಂಟಾಗುವ ಬದಲಾವಣೆಗಳನ್ನು ಅದರ ಪರಿಣಾಮಗಳನ್ನು ಕುರಿತು ಅಧ್ಯಯನಗಳು ನಡೆಯುತ್ತಲೇ ಇರುತ್ತದೆ ಹಿಂದಿನ ಕಾಲದಿಂದ ಇಂದಿನ ಕಾಲದವರೆಗೆ ವಿವಿಧ ಕಾಲಘಟ್ಟಗಳಲ್ಲಿ ರಚನೆಗೊಂಡಿರುವ ಶಾಸನಗಳಲ್ಲಿ ತಾಮ್ರಪಟಗಳಲ್ಲಿ ತಾಳೆಗರಿಗಳಲ್ಲಿ ಮತ್ತು ಗ್ರಂಥಗಳಲ್ಲಿ ಲಿಪಿರೂಪದಲ್ಲಿ ದಾಖಲಾಗಿದ್ದೂ ಇಂದಿಗೂ ಬಳಕೆಯಲ್ಲಿರುವ ಭಾಷೆಯನ್ನು ಅವಲೋಕಿಸಿದಾಗ ಅದರ ಭಾಷಿಕ ಸಾಮಗ್ರಿಗಳಲ್ಲಿ ಅನೇಕ ತೆರನಾದ ಬದಲಾವಣೆಗಳು ಉಂಟಾಗಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಭಾಷೆಯ ಬದಲಾವಣೆ ಎಂದರೆ ಭಾಷಿಕ ಸಾಮಗ್ರಿಗಳಾದ ಧ್ವನಿರಚನೆ, ಪದರಚನೆ, ವಾಕ್ಯರಚನೆ, ಅರ್ಥ ರಚನೆ, ಶಬ್ಧಸಂಪತ್ತು ಮತ್ತು ಭಾಷೆಯ ಕಾರ್ಯಗಳಲ್ಲಿ ಉಂಟಾಗುವ ಬದಲಾವಣೆಗಳು ಎಂದು ಅರ್ಥ.

ಕನ್ನಡ ಭಾಷಾ ವಿಜ್ಞಾನಿ ಡಿ.ಎನ್. ಶಂಕರಭಟ್ಟರು ಕನ್ನಡ ಭಾಷೆಯ ಚರಿತ್ರೆಯನ್ನು ರಚಿಸಿದ್ದಾರೆ. ಕನ್ನಡ ಬರಹದ ಚರಿತ್ರೆಯನ್ನು ಬೇರೆ ಬೇರೆ ಶತಮಾನಗಳಲ್ಲಿನ ಶಾಸನಗಳು ಹಾಗೂ ಇತರ ಗ್ರಂಥಗಳನ್ನು ಹೋಲಿಸಿ ರಚಿತವಾದ ಕನ್ನಡ ಬರಹಗಳನ್ನು ನೋಡಿ ಅವುಗಳ ನಡುವೆ ಕಾಣಿಸುವ ವ್ಯತ್ಯಾಸಗಳ ಆಧಾರದ ಮೇಲೆ ಬರೆಯುವ ಚರಿತ್ರೆಯಾಗಿ ನೋಡಿದ್ದಾರೆ. ಹಾಗೆಯೇ ಮಾತಿನ ಚರಿತ್ರೆಯನ್ನು ಈಗ ಬಳಕೆಯಲ್ಲಿರುವ ಕನ್ನಡ ಭಾಷೆಯನ್ನು ಇತರ ಕನ್ನಡ ಉಪಭಾಷೆಗಳ ಜೊತೆಯಲ್ಲಿ ಮತ್ತು ಇತರ ದ್ರಾವಿಡ ಭಾಷೆಗಳೊಂದಿಗೆ ಹೋಲಿಸಿನೋಡಿ ಅವುಗಳ ನಡುವೆ ಕಾಣಿಸುವ ವ್ಯತ್ಯಾಸಗಳ ಆಧಾರದ ಮೇಲೆ ಮಾತಿನ ಚರಿತೆಯನ್ನು ಬರೆಯುವುದು ಎಂದು ಹೇಳಿದ್ದಾರೆ.

ಕನ್ನಡ ಭಾಷೆಯನ್ನು ಕಲಿಯಲು ಹಾಗೂ ಬರಹವನ್ನು ಬರೆಯಲು ಹಲವಾರು ತೊಡಕುಗಳು ಉಂಟಾಗುತ್ತದೆ. ಭಾಷೆಯೂ ಕ್ಲಿಷ್ಟವಾದಾಗ ಅದು ಜೀವಂತಿಕೆಯನ್ನು ಪಡೆಯುವುದಿಲ್ಲ ಕನ್ನಡ ಭಾಷಿಕ ಸಮುದಾಯದವರು ಕನ್ನಡ ಅಕ್ಷರಗಳ ಮಹಾಪ್ರಾಣಾಕ್ಷರಗಳನ್ನು ಉಚ್ಚರಣೆಯ ಸಮಯದಲ್ಲಿ ಬಳಸುವುದಿಲ್ಲ. ಅವರು ಆಡುನುಡಿಗಳನ್ನು ಹಾಡುವಾಗ ಸಾಮಾನ್ಯವಾಗಿ ಅಲ್ಪಪ್ರಾಣಾಕ್ಷರಗಳನ್ನು ಬಳಸುತ್ತಿರುವುದನ್ನು ಡಿ.ಎನ್.ಶಂಕರಭಟ್ಟರು ವೈಜ್ಞಾನಿಕವಾದ ಆಲೋಚನೆಗಳ ಮೂಲಕ ವಿವರಿಸುತ್ತಿದ್ದಾರೆ.

ಈ ನಿಟ್ಟಿನಲ್ಲಿ ಎರಡು ಸಾವಿರ ವರ್ಷಗಳ ಇತಿಹಾಸವಿರುವ ಕನ್ನಡದ ಬರಹ ಭಾಷೆಯೂ ಸಂಸ್ಕೃತ ಭಾಷೆಯಿಂದ ಹಲವಾರು ಪದಗಳನ್ನು ಎರವಲಾಗಿ ತೆಗೆದುಕೊಂಡು ಸಂಸ್ಕೃತಮಯವಾಗಿದೆ ಇದನ್ನು ಬದಲಾಯಿಸಲು ಸಾಧ್ಯ ಆದರೆ ಈ ನಿಯಮವನ್ನು ತಲೆಮಾರಿನಿಂದ – ತಲೆಮಾರಿಗೆ ಯಾವುದೇ ಬದಲಾವಣೆಗೆ ಒಳಗಾಗದೆ ಅದನ್ನು ಕಟ್ಟಳೆಯಂತೆ ಪಾಲಿಸುತ್ತಿರುವುದು ಶೋಚನೀಯ ಸ್ಥಿತಿಯಾಗಿದೆ.

ಸಂಸ್ಕೃತದಿಂದ ಎರವಲು ತೆಗೆದುಕೊಂಡಿರುವ ಪದಗಳನ್ನು ಉಚ್ಚಾರಣೆಯಂತೆ ಬರೆಯುವಾಗ ಹಲವಾರು ತೊಡಕುಗಳು ಉಂಟಾಗುತ್ತದೆ. ಆದ್ದರಿಂದ ಸಂಸ್ಕೃತ ಪದಗಳಿಗೆ ಬದಲಾಗಿ ನಮ್ಮ ಕನ್ನಡ ಭಾಷೆಯ ಪದಗಳನ್ನು ಬಳಸುವುದರಿಂದ ಕನ್ನಡ ಭಾಷೆಯಲ್ಲಿ ಹೊಸ ಪದಗಳನ್ನು ಕಟ್ಟುವುದರಿಂದ ಭಾಷೆಯೂ ಸುಲಭವಾಗುತ್ತದೆ

ಹಾಗೂ ಕನ್ನಡಿಗರು ಬರಹವನ್ನು ಸುಲಭವಾಗಿ ತಪ್ಪಿಲ್ಲದ ಹಾಗೆ ಬರೆಯುವರು. ಆದ್ದರಿಂದ ಷ.ಋ.ಐ.ಔ. ಅಕ್ಷರಗಳನ್ನು ವರ್ಣಮಾಲೆಯಿಂದ ಹೊರಗಿಡುವುದು ಅಕ್ಷರಗಳ ಸಂಖ್ಯೆಯನ್ನು ಕಡಿಮೆ ಮಾಡುವುದು.

ಇದರಿಂದ ಕನ್ನಡ ಭಾಷಿಕ ಸಮುದಾಯವರು ತಾವು ಉಚ್ಚರಿಸುವ ಹಾಗೆಯೇ ಅಕ್ಷರಗಳನ್ನು ಬರೆಯುವುದರಿಂದ ಕನ್ನಡ ಭಾಷೆಯೂ ಸುಲಭವಾಗುತ್ತದೆ. ಭಾಷೆಯು ಹೇಗೆ ಹುಟ್ಟಿತು ಎಂಬುದನ್ನು ಕುರಿತು ಇದರವರೆಗೂ ಅನೇಕ ಬಗೆಯ ವಾದಗಳನ್ನು ಭಾಷಾ ವಿಜ್ಞಾನಿಗಳು ಮಂಡಿಸಿದ್ದಾರೆ. ಆದರೆ ಇದುವರೆಗೂ ಯಾವೊಂದು ವಾದವನ್ನು ಸಮರ್ಪಕವೆಂದು ಒಪ್ಪಿಕೊಂಡಿಲ್ಲ.

ಇತಿಹಾಸ ಪೂರ್ವದಿಂದಲೂ ಇಂದಿನ ತನಕ ವಿವಿಧ ಕಾಲಘಟ್ಟಗಳಲ್ಲಿ ಬೇರೆ ಬೇರೆ ಭಾಷೆಗಳನ್ನಾಡುವ ಸಮುದಾಯಗಳ ನಡುವೆ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ, ತಂತ್ರಜ್ಞಾನ ಮತ್ತು ವೈಜ್ಞಾನಿಕ ಸಂಬಂಧ ಹಾಗೂ ಸಂಘರ್ಷಗಳು ಉಂಟಾದಾಗ ಭಾಷಿಕ ಸಮುದಾಯವರು ಇನ್ನೊಂದು ಭಾಷಿಕ ಸಮುದಾಯದವರ ವೇಶಭೂಷಣಗಳು, ಆಚಾರ ವಿಚಾರಗಳು, ಆಹಾರ ಪದ್ಧತಿಗಳು ಹಾಗೂ ಇನ್ನಿತರ ನಡೆನುಡಿಗಳು ದುರ್ಬಲ ಸಮುದಾಯಗಳ ಮೇಲೆ ಪರಿಣಾಮ ಬೀರುವಾಗ ಪ್ರಬಲ ಭಾಷಿಕ ಸಮುದಾಯದವರ ವಸ್ತುಗಳ, ವಿಷಯಗಳ, ಆಚರಣೆಗಳ ಹೆಸರುಗಳನ್ನು ಉಚ್ಚರಿಸಿ ಬಳಸುವಾಗ ಹಲವಾರು ಬದಲಾವಣೆಗಳಿಗೆ ಒಳಗಾಗುತ್ತದೆ.

ಕನ್ನಡ ಭಾಷಿಕ ಸಮುದಾಯದವರು ಕ್ರಿ.ಪೂ ದಿಂದ ಕ್ರಿ.ಶ ೨೧ನೇ ಶತಮಾನದವರೆಗೂ ಅನ್ಯ ಭಾಷಿಕ ಸಮುದಾಯದವರಿಂದ ಅಪಾರ ಸಂಖ್ಯೆಯ ಭಾಷಿಕ ಸಾಮಾಗ್ರಿಗಳನ್ನು ಸ್ವೀಕರಿಸುತ್ತಲೇ ಇದ್ದಾರೆ. ಕ್ರಿ.ಪೂದಲ್ಲಿ ಆರ್ಯ ಜನಾಂಗದವರಿಂದ ಸಂಸ್ಕೃತ ಭಾಷಿಕ ಸಾಮಾಗ್ರಿಗಳನ್ನು ಕ್ರಿ.ಶ.ದ ಪ್ರಾರಂಭದ ಅವಧಿಯಲ್ಲಿ ಪ್ರಾಕೃತ ಭಾಷಿಕ ಸಮುದಾಯದಿಂದ ಪ್ರಾಕೃತ ಭಾಷೆಯ ಸಾಮಾಗ್ರಿಗಳನ್ನು ಕ್ರಿ.ಶ. ೧೩-೧೪ನೇ ಶತಮಾನದಿಂದ ಮೊಘಲ್ ಜನಾಂಗದವರಿಂದ ಪರ್ಷಿಯನ್, ಅರಾಬಿಕ್ ಮತ್ತು ಉರ್ದು ಭಾಷಿಕ ಸಾಮಾಗ್ರಿಗಳನ್ನು ಕ್ರಿಶ ೧೬ನೇ ಶತಮಾನದಲ್ಲಿ ಪೋರ್ಚುಗೀಸರಿಂದ ಪೋರ್ಚುಗೀಸ್ ಭಾಷಾ ಸಾಮಗ್ರಿಗಳನ್ನು ಕ್ರಿಶ ೧೯-೨೦ನೇ ಶತಮಾನದಲ್ಲಿ ಬ್ರಿಟಿಷರಿಂದ ಇಂಗ್ಲೀಷ್ ಭಾಷಿಕ ಸಾಮಗ್ರಿಗಳನ್ನು ಕನ್ನಡ ಭಾಷಿಕ ಸಮುದಾಯದವರು

ಸ್ವೀಕರಿಸಿದ್ದಾರೆ. ಆದುದರಿಂದಲೇ ಇಂದು ಕನ್ನಡಿಗರಾದ ನಾವು ಬಳಸುತ್ತಿರುವ ಕನ್ನಡ ಭಾಷೆಯಲ್ಲಿ ಶೇ೭೦ ಕ್ಕಿಂತ ಹೆಚ್ಚಿನ ಸಂಖ್ಯೆಯ ಪದಗಳು ಅನ್ಯ ಭಾಷಾ ಪದಗಳಾಗಿವೆ. ಅದರಲ್ಲೂ ಸಂಸ್ಕೃತ ಮತ್ತು ಇಂಗ್ಲೀಷ್ ಭಾಷೆಯ ಪದಗಳು ಜಾಸ್ತಿ.

ಆರ್ಯ ಜನಾಂಗದವರು ದ್ರಾವಿಡರನ್ನು ಅಧೀನವಾಗಿಸಿಕೊಂಡು ಕ್ರಿಪೂದಲ್ಲಿ ಆಡಳಿತವನ್ನು ನಡೆಸಿದ ಕಾರಣದಿಂದ ಕನ್ನಡಿಗರ ಧಾರ್ಮಿಕ, ಸಾಹಿತ್ಯಕ ಮತ್ತು ಸಾಂಸ್ಕೃತಿಕ ರಂಗದಲ್ಲಿ ಸಂಸ್ಕೃತ ಪದಗಳ ಬಳಕೆ ಹೇರಳವಾಗಿದೆ.

ಯಾವುದೇ ಒಂದು ಭಾಷಿಕ ಸಮುದಾಯದವರು ಅನ್ಯಭಾಷೆಯ ಪದಗಳನ್ನು ಸ್ವೀಕರಿಸಿ ಬಳಸುವಾಗ ತಮ್ಮ ಭಾಷೆಯ ಧ್ವನಿ ರಚನೆ ಮತ್ತು ಪದರಚನೆಯ ನಿಯಮಗಳಿನುಗುಣವಾಗಿ ಅನ್ಯ ಭಾಷಾ ಸಾಮಗ್ರಿಗಳನ್ನು ಹೊಂದಿಸಿಕೊಂಡು ಉಚ್ಚರಿಸುತ್ತಾರೆ. ಆದುದರಿಂದ ಅನ್ಯಭಾಷೆಯ ಪದಗಳು ಅನೇಕ ಬಗೆಯ ವ್ಯತ್ಯಾಸಗಳು ಪಡೆದು ಬಳಕೆಗೆ ಬರುತ್ತದೆ.

ಕನ್ನಡ ಭಾಷೆಗೆ ತಮಿಳು, ಮಲಯಾಳಂ, ತೆಲುಗು, ತುಳು, ಗೋಂಡಿ, ಕೂಯಿ, ಮೊದಲಾದ ಭಾರತದ ಹಲವು ದ್ರಾವಿಡ ಭಾಷೆಗಳೊಂದಿಗೆ ಸಂಬಂಧವಿದೆ. "ಕನ್ನಡ ವ್ಯಾಕರಣ ಎಂದು ಶಾಲೆಯಲ್ಲಿ ಕಲಿಸುತ್ತಿರುವುದು ನಿಜಕ್ಕೂ ಕನ್ನಡದ ವ್ಯಾಕರಣವೇ ಅಲ್ಲವೆಂದು ಹೇಳುವುದು ಡಿ.ಎನ್. ಶಂಕರಭಟ್ಟರ ಗಟ್ಟಿನಿಲುವುಗಳಲ್ಲಿ ಒಂದಾಗಿದೆ". ಕನ್ನಡದ ವ್ಯಾಕರಣ ಎಂತಹದು, ಅದು ಹೇಗೆ ಪದಗಳನ್ನು ಮತ್ತು ಸೊಲ್ಲುಗಳನ್ನುಕಟ್ಟುವ ಬಗೆಯನ್ನು ತಿಳಿಸಿಕೊಡುತ್ತದೆ. ಮತ್ತು ಈ ತಿಳಿವಿನ ಮೂಲಕ ಹೇಗೆ ಬರಹಗಳನ್ನು ಸರಿಯಾಗಿ ಬರೆಯಲು ಅಥವಾ ಬರವಣಿಗೆಯನ್ನು ಸರಿಪಡಿಸಬಹುದು ಎಂದು ತಿಳಿಸಿಕೊಟ್ಟ ಕೀರ್ತಿ ಇವರಿಗೆ ಸಲ್ಲುತ್ತದೆ.

ಕನ್ನಡದಲ್ಲಿ ಬಳಕೆಯಾಗುವ ಪದಗಳು ಮತ್ತು ಪದರೂಪಗಳು ಸರಿಯೋ ತಪ್ಪೋ ಎಂದು ತೀರ್ಮಾನಿಸುವಲ್ಲಿ ನಾವು ಯಾವ ನಿಯಮಗಳನ್ನು ಬಳಸಬೇಕು ಹಾಗೂ ಕನ್ನಡದ ನಿಯಮಗಳನ್ನೇ ಪಾಲಿಸಬೇಕೆಂದು ಯಾರೂ ಹೇಳಬಹುದು. ಆದರೆ ಇದರಲ್ಲಿಯೂ ಹಲವಾರು ಗೊಂದಲಗಳಿವೆ ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳನ್ನು ಕನ್ನಡದಲ್ಲಿ ಬಳಸುವಾಗ ಸಂಸ್ಕೃತದ ಕಟ್ಟಲೆಗಳನ್ನು ಬಳಸಬೇಕೆಂದು

ಹೇಳುತ್ತಾರೆ. ಕನ್ನಡದ ವಿದ್ವಾಂಸರಲ್ಲಿ ಹಿಂದಿನ ಕಾಲದಿಂದಲೂ ಬೆಳೆದು ಬಂದಿರುವ ಕನ್ನಡದ ಕುರಿತಾಗಿರುವ ಕೀಳರಿಮೆ ಮತ್ತು ಸಂಸ್ಕೃತದ ಕುರಿತಾಗಿರುವ ಅತಿಯಾದ ಆದರ ಮತ್ತು ಅಭಿಮಾನಗಳೇ ಇದಕ್ಕೆ ಕಾರಣವಾಗಿದೆ.

ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳಲ್ಲಿ ಬರುವ ಮಹಾಪ್ರಾಣ ಷ ಕಾರ ಋ ಕಾರ ಮೊದಲಾದ ಎಲ್ಲ ಮಹಾಪ್ರಾಣಾಕ್ಷರಗಳು ಕೆಲವು ಬರಿಗೆಗಳು ಹೆಚ್ಚಿನ ಕನ್ನಡಿಗರ ಓದಿನಲ್ಲಿ ಇಲ್ಲವೇ ಮಾತಿನಲ್ಲಿ ಕಾಣಿಸುವುದಿಲ್ಲ ಹಾಗಿದ್ದರೂ ಅವನ್ನು ಸಂಸ್ಕೃತದಲ್ಲಿರುವ ಹಾಗೆಯೇ ಬರೆಯಬೇಕು ಇಲ್ಲವಾದರೆ ಅದು ತಪ್ಪಾಗುತ್ತದೆ ಎಂದು ಹೇಳುವುದೂ ಸಂಸ್ಕೃತದ ಕಟ್ಟಲೆಗಳನ್ನು ಕನ್ನಡದ ಮೇಲೆ ಹೊರಿಸುವ ತಪ್ಪು ದಾರಿಯಾಗಿದೆ ಹೆಚ್ಚಿನ ಕನ್ನಡಿಗರ ಓದಿನಲ್ಲಿ ಇಲ್ಲವೇ ಮಾತಿನಲ್ಲಿ ಈ ಎರವಲು ಪದಗಳು ಹೇಗೆ ಕಾಣಿಸುತ್ತವೆಯೋ ಹಾಗೆ ಬರೆಯುವುದೇ ಕನ್ನಡದ ಮಟ್ಟಿಗೆ ಸರಿಯಾದ ದಾರಿ ಎಂದು ಅಭಿಪ್ರಾಯ ಪಡುತ್ತಾರೆ.

ಬರಹದಲ್ಲಿ ತಪ್ಪು-ಸರಿ ಎಂಬ ಪರಿಕಲ್ಪನೆಯನ್ನು ಈ ಅರ್ಥದಲ್ಲಿ ಬಳಸಲು ಸಾಧ್ಯವಿದೆ ಕನ್ನಡದ ಕೆಲವು ಆಡುನುಡಿಗಳಲ್ಲಿ ಪದಗಳ ಮೊದಲಿನ ಹ, ಕಾರ ಬಿದ್ದು ಹೋಗಿದೆ ಹಾಲು ಎಂಬುದು ಆಲು ಎಂದಾಗಿದೆ, ಹಣ್ಣು ಎಂಬುದು ಅಣ್ಣು ಎಂದಾಗಿದೆ, ಹಕ್ಕಿ ಎಂಬುದು ಅಕ್ಕಿ ಎಂದಾಗಿದೆ, ಹುಳ ಎಂಬುದು ಉಳ ಎಂದಾಗಿದೆ, ಈ ರೀತಿ ಕೆಲವರು ಕನ್ನಡಿಗರು ತಮ್ಮ ಆಡುನುಡಿಯ ಪದಗಳಲ್ಲಿದ್ದ ಹ ಕಾರವನ್ನು ಕಳೆದುಕೊಂಡುದರಲ್ಲಿ ತಪ್ಪಾಗಿರುವಂತಹದು ಏನೂ ಇಲ್ಲ. ಅದು ಅವರ ಆಡುನುಡಿಯಲ್ಲಿ ಸ್ವಾಭಾವಿಕವಾಗಿ ನಡೆದಿರುವ ಒಂದು ಬದಲಾವಣೆ ಮಾತ್ರ. ಇದಲ್ಲದೆ ಅದು ಅವರ ಆಡುನುಡಿಯನ್ನು ಕೆಡಿಸಿಲ್ಲ ಅದರ ಜೀವಂತಿಕೆಯನ್ನು ಉಳಿಸಿದೆ ಭಾಷೆಯ ನಿರಂತರ ಬದಲಾವಣೆಯೂ ಜೀವಭಾಷೆಯ ವೈಶಿಷ್ಟ್ಯ

ಸಂಸ್ಕೃತ ಎರವಲುಗಳನ್ನು ಹೆಚ್ಚು ಕಡಿಮೆ ಸಂಸ್ಕೃತದಲ್ಲಿರುವ ಹಾಗೆಯೇ ಬರೆಯಬೇಕು ಎಂಬ ಕಟ್ಟಲೆ ಕನ್ನಡದ ಮಟ್ಟಿಗೆ ತೀರ ಅನವಶ್ಯಕವಾದುದು ಮಾತ್ರವಲ್ಲ ಕನ್ನಡ ಬರಹವನ್ನು ಎಲ್ಲಾ ಕನ್ನಡಿಗರೂ ಸುಲಭವಾಗಿ ಕಲಿತು ತಮ್ಮದಾಗಿಸಿಕೊಳ್ಳುವಲ್ಲಿ ಒಂದು ದೊಡ್ಡ ತೊಡಕಾಗಿದೆ. ಆದ್ದರಿಂದ ತದ್ಭವ ಮತ್ತು ಗ್ರಾಮ್ಯರೂಪದಲ್ಲಿ ಈಗಲೂ ಬದಲಾಯಿಸಿ ಬಳಸುತ್ತಿರುವುದು.

ಆದಿಮಾನವರ ಆಂಗಿಕ ಸಂಜ್ಞೆಗಳ ಜೊತೆ ಜೊತೆಯಲ್ಲೇ ಹೊರಟ ಧ್ವನಿಗಳು ಮತ್ತು ರಾಗವಾಗಿ ಹಾಡ ತೊಡಗಿದ ಧ್ವನಿಯಿಂದ ಭಾಷೆಯು ರೂಪುಗೊಂಡಿರಬೇಕೆಂದುವಾದಿಸಲಾಗಿದೆ. ಆದರೆ ಈಗಾಗಲೇ ನಾವು ತಿಳಿದಿರುವಂತೆ ಭಾಷೆ ಎಂಬುದು ಯಾದೃಚ್ಛಿಕ ಧ್ವನಿ ಸಂಕೇತಗಳಿಂದ ಕೂಡಿದ ಒಂದು ವ್ಯವಸ್ಥೆ ಕೆಲವೇ
ಸೀಮಿತವಾದ ಮಾತಿನ ಧ್ವನಿಗಳ ಸಂಯೋಜನೆಯಿಂದ ಸಾವಿರಾರು ಪದಗಳು ಮತ್ತು ವಾಕ್ಯಗಳು ನಿರಂತರವಾಗಿ ಹೊಸ ಹೊಸ ಬಗೆಗಳಲ್ಲಿ ರಚನೆಗೊಳ್ಳುತ್ತಿರುತ್ತವೆ.

ಪ್ರಪಂಚದಲ್ಲಿ ಇದುವರೆಗೆ ಬಳಕೆಯಲ್ಲಿದ್ದ ಹಾಗೂ ಬಳಕೆಯಲ್ಲಿರುವ ಎಲ್ಲಾ ಭಾಷೆಗಳು ಸ್ವಯಂ ಪರಿಪೂರ್ಣವಾಗಿವೆ. ಅಂದರೆ ಅವುಗಳ ವ್ಯಾಕರಣ ವ್ಯವಸ್ಥೆ ಸುಸಂಬದ್ಧವಾಗಿದೆ. ಯಾವೊಂದು ಭಾಷೆಯಲ್ಲಿಯೂ ಪ್ರಾರಂಭದ ಹಂತ, ಬೆಳವಣಿಗೆಯ ಹಂತ, ಪರಿಪೂರ್ಣತೆಯ ಹಂತ, ಎಂಬುದಿಲ್ಲ ಪ್ರತಿಯೊಂದು ಭಾಷೆಯೂ ನಿತ್ಯ ಪರಿವರ್ತನಾಶೀಲವಾಗಿದೆ. ಆದುದರಿಂದ ಭಾಷೆಯು ಹೇಗೆ ಹುಟ್ಟಿತು ಎಂಬ ವಾದಗಳನ್ನು ನುಡಿಯರಿಗರು ಕೈ ಬಿಟ್ಟಿದ್ದಾರೆ.

ಎರಡು ಅಥವಾ ಎರಡಕ್ಕಿಂತ ಹೆಚ್ಚಿನ ಸಂಖ್ಯೆಯ ಭಾಷೆಗಳಲ್ಲಿನ ಧ್ವನಿಗಳನ್ನು ಪರಸ್ಪರ ಹೋಲಿಸಿ ಅವುಗಳ ಧ್ವನಿ ರೂಪದಲ್ಲಿ ಮತ್ತು ಅರ್ಥದಲ್ಲಿ ಕಂಡು ಬರುವ ಸಮಾನವಾದ ಮತ್ತು ವಿಭಿನ್ನವಾದ ಲಕ್ಷಣಗಳ ಆಧಾರದ ಮೇಲೆ ಜಗತ್ತಿನಲ್ಲಿ ಬಳಕೆಯಲ್ಲಿದ್ದ ಮತ್ತು ಬಳಕೆಯಲ್ಲಿರುವ ಭಾಷೆಗಳೆಲ್ಲವನ್ನು ಹಲವು ಭಾಗಗಳಾಗಿ ಅಧ್ಯಯನಕ್ಕೆ ತೊಡಗಿಸಿಕೊಂಡಾಗ ಭಾಷೆಗಳಲ್ಲಿನ ಪದ ರೂಪಗಳನ್ನು ಗುರುತಿಸಿ ವಿಂಗಡಿಸಿ ವಿಶ್ಲೇಷಣೆ ಮಾಡುವಾಗ ಮೂಲ ಭಾಷೆಗಳ ಚರಿತ್ರೆಯಲ್ಲಿ ನಡೆದ ಬದಲಾವಣೆಯ ಫಲದಿಂದಾಗಿ ಇವತ್ತು ಸಾವಿರಾರು ಭಾಷೆಗಳು ಕವಲೊಡೆದು ಪ್ರತಿಯೊಂದು ಭಾಷೆಯೂ ಇತರ ಭಾಷೆಗಳೊಂದಿಗೆ ಕೊಡು-ಕೊಳುಗೆಗಳನ್ನು ಮಾಡಿಕೊಂಡಿರುವುದರಿಂದ ಕನ್ನಡ ಭಾಷೆಯ ಮೇಲೆ ಹಲವಾರು ಭಾಷೆಗಳ ಪ್ರಭಾವ ಹಾಗೂ ಅಧಿಕಾರದಿಂದ ನಮ್ಮ ಭಾಷೆಯೂ ಅಳಿವಿನ ಹಂಚಿನಲ್ಲಿದೆ. ಇದನ್ನು ನಾವು ಸರಿಪಡಿಸಲು ಕನ್ನಡ ಭಾಷೆಯನ್ನು ಕ್ಲಿಷ್ಟವೆಂಬ ಭಾವನೆಯಿಂದ ಹೊರ ತಂದು ಕಬ್ಬಿಣದ ಕಡಲೆಯಂತೆ ಇರುವ ಭಾಷೆಯನ್ನು ಸುಲಿದ ಬಾಳೆಹಣ್ಣಿನ ಹಾಗೆ ಮಾಡಬೇಕೆಂಬ ನಿಲುವಿನ ಆಧಾರವನ್ನು ಇಟ್ಟುಕೊಂಡು ಡಿ.ಎನ್. ಶಂಕರಭಟ್ಟರು ಬರವಣಿಗೆಯನ್ನು

ಸುಲಭಗೊಳಿಸಿ ಕನ್ನಡ ಭಾಷೆಯನ್ನು ಹೊಸ ರೂಪವಾಗಿ ಬರೆಯಲು ವೈಜ್ಞಾನಿಕ ಆಲೋಚನೆಗಳನ್ನು ಮುಂದಿರಿಸಿ,[೨] ಕನ್ನಡ ಭಾಷೆಯನ್ನು ಬರೆಯಲು ೩೨ ಅಕ್ಷರಗಳೇ ಅಗತ್ಯವೆಂದು ಪ್ರತಿಪಾದಿಸಿದ್ದಾರೆ.

ಈ ರೀತಿ ಜಗತ್ತಿನ ಎಲ್ಲಾ ಭಾಷೆಗಳನ್ನು ಬೇರೆ ಬೇರೆ ಭಾಷಾ ಕುಟುಂಬಗಳಲ್ಲಿ ಇರಿಸಿ ಹೇಳಲು ಮುಖ್ಯವಾಗಿ ಅವುಗಳ ಚರಿತೆ ಆಧಾರವಾಗಿರುತ್ತದೆ ಒಂದು ಭಾಷೆಯನ್ನಾಡುವ ಜನ ಸಮುದಾಯದಲ್ಲಿ ಹಲವಾರು ಗುಂಪು ಗುಂಪುಗಳಾಗಿ ದೂರ-ದೂರದಲ್ಲಿರುವ ಊರುಗಳಿಗೆ ಹೋಗಿ ನೆಲೆಸಿದಾಗ ಅವರೊಳಗಿನ ಸಂಪರ್ಕ ಕಡಿಮೆಯಾಗುತ್ತಾ ಬರುತ್ತದೆ. ಇದರಿಂದಾಗಿ ಅವರು ಬಳಸುವ ಭಾಷೆಯಲ್ಲಿ ಬದಲಾವಣೆಗಳು ಬೇರೆ ಬೇರೆ ಕಾರಣಗಳಿಂದ ಉಪ ಭಾಷೆಗಳಿಂದ ಪದಗಳನ್ನು ಎರವಲಾಗಿ ಪಡೆಯುತ್ತದೆ. ನಂತರ ಆ ಪದವು ಹೇಗೆ ಉಚ್ಚರಿಸುತ್ತೇವೆಯೋ ಹಾಗೆ ಬರವಣಿಗೆಯಲ್ಲಿ ಬರೆಯುವಾಗ ಹಲವಾರು ತಪ್ಪುಗಳನ್ನು ಮಾಡುತ್ತೇವೆ. ಉಲಿಯುವ ಪದಕ್ಕೂ ಬರಿಗೆಯ ಪದಕ್ಕೂ ಹಲವಾರು ವ್ಯತ್ಯಾಸಗಳು ಉಂಟಾಗಿ ಕಲಿಸುವರ ಹಾಗೂ ಕಲಿಯುವವರ ನಡುವೆ ಹಲವಾರು ತೊಡಕುಗಳು ಹಾಗೂ ಗೊಂದಲವನ್ನು ಉಂಟು ಮಾಡಿ ಭಾಷೆಯೂ ಆ ಭಾಷಿಕ ಸಮುದಾಯದವರ ತಾಯ್ನುಡಿಯಿಂದ ಭಿನ್ನವಾಗಿ ಕಾಣುವುದರಿಂದ ಭಾಷೆಯೂ ಕಷ್ಟವಾಗುತ್ತದೆ.

ಅಡಿ ಟಿಪ್ಪಣಿ:

೧.ಕನ್ನಡ ವ್ಯಾಕರಣ ಯಾಕೆ ಬೇಕು. ಡಿ.ಎನ್.ಶಂಕರಭಟ್ಟ, ಭಾಷಾ ಪ್ರಕಾಶನ-೨೦೦೬, ಪು.ಸ-೧೧.

೨. ಕನ್ನಡ ಬರಹವನ್ನು ಸರಿಪಡಿಸೋಣ, ಡಿ.ಎನ್.ಶಂಕರಭಟ್ಟ, ಪ್ರಕಾಶಕರು ಭಾಷಾ ಪ್ರಕಾಶನ, ಹೆಗ್ಗೋಡು,ಸಾಗರ-೨೦೦೬.ಪು-೨೪,೨೭೧೦

# ಕನ್ನಡ ಬರಹವನ್ನು ಕುರಿತು

## – ಅಭಿಪ್ರಾಯ ಮತ್ತು ಚಿಂತನೆ



## ಅಧ್ಯಾಯ ೦೨

## ಕನ್ನಡ ಬರಹವನ್ನು ಕುರಿತು- ಅಭಿಪ್ರಾಯ ಮತ್ತು ಚಿಂತನೆ

ಬಡಗಣ ಭಾರತದಿಂದ ಕನ್ನಡ ನಾಡಿಗೆ ಗುಳೆ (ವಲಸೆ) ಬಂದ ಆರ್ಯರೇ ಕನ್ನಡದಲ್ಲಿ ಬರಿಗೆಯನ್ನು ಮೊದ ಮೊದಲು ಮಾಡಿದರೆಂಬ ಊಹೆಗಳಿವೆ. ಆದರೆ ವಲಸಿಗರಿಗೆ ಅಲ್ಲಿಯೇ ವಾಸಿಸುತ್ತಿದ್ದ ಕನ್ನಡಿಗರಿಗೆ ಹೆಚ್ಚು ಸಂಪರ್ಕವಿಲ್ಲದಿರುವುದರಿಂದ ಅವರಿಗೆ ಬೇಕಾದ ಹಾಗೆ ಬರವಣಿಗೆಯ ಬರಹ ರೂಪಗಳನ್ನು ರಚಿಸಿದರು. ಆದರೂ ಆರ್ಯರಿಂದ ಪರಿಚಿತವಾದ ಕನ್ನಡ ಬರಹ ರೂಪವು ಹಲವಾರು ಭಾಷೆಗಳಿಂದ ಪದಗಳನ್ನು ಎರವಲಾಗಿ ಪಡೆದುಕೊಂಡು ಅವುಗಳೇ ಕನ್ನಡದ ಪದಗಳೆಂದು ಭಾವಿಸಿ ತಲೆಮಾರಿನಿಂದ ತಲೆಮಾರಿಗೆ ಭಾಷೆಯನ್ನು ಕೊಂಡೊಯ್ದರು. ಇದರಿಂದ ಕನ್ನಡ ಭಾಷೆಯಲ್ಲಿ ಕನ್ನಡ ಪದಗಳಿಕ್ಕಿಂತ ಬೇರೆ ಪದಗಳು ಹೆಚ್ಚಾಗಿರುವುದರಿಂದ ಕನ್ನಡ ಭಾಷಿಕರಿಗೆ ಕನ್ನಡ ಬರಹವು ಕ್ಲಿಷ್ಟವಾಗಿದೆ.

ಪದಗಳನ್ನೂ ಓದುವ ಹಾಗೆಯೇ ಬರೆಯುವ ಕಾರಣ ಬರಹಕ್ಕೂ ಆಡು ಮಾತಿಗೂ ನಡುವೆ ಅಂತರ ಇರುತ್ತದೆ. ಸಾಮಾನ್ಯ ಜನರಿಗೆ ಮನಸ್ಸಿನಲ್ಲಿರುವ ಭಾವನೆಗಳನ್ನು ಸುಲಭವಾಗಿ ಅರ್ಥವಾಗುವಂತಹ ಕನ್ನಡವಾಗಬೇಕು. ಸಂಸ್ಕೃತ ಪದಗಳನ್ನು ಅವುಗಳ ಉಚ್ಚಾರಣೆ ಹೇಗಿದೆಯೋ ಹಾಗೆ ಬರೆಯುವ ನಿರ್ಧಾರವನ್ನು ಬದಲಿಸಿದ್ದಲ್ಲಿ ಕನ್ನಡ ಬರಹವನ್ನು ಕಲಿಸುವ ಕೆಲಸ ಹೆಚ್ಚು ಸುಲಭವಾದದ್ದು. ಕನ್ನಡದ್ದೇ ಪದಗಳನ್ನು ಬಳಸುವುದರ ಜೊತೆಗೆ ಎರವಲು ಪದಗಳನ್ನು ಸ್ವೀಕರಿಸುವಾಗ ಅನ್ನುವಂತೆ ಬರೆಯುವುದರಿಂದ ಅಂದರೆ ಸಂಸ್ಕೃತ ಪದಗಳನ್ನು ಎರವಲು ಪಡೆಯುವಾಗ ಮಹಾಪ್ರಾಣಾಕ್ಷರಗಳ ಬದಲು ಅಲ್ಪ ಪ್ರಾಣಗಳನ್ನಾಗಿ ಬರೆಯುವುದು.

ಅಂದರೆ **ಖ.ಫ.ಛ.ಝ** ಮುಂತಾದವುಗಳನ್ನು **ಕ, ಗ, ಚ, ಜ** ಎಂದು ಬರೆಯುವುದರಿಂದ ಕನ್ನಡ ಭಾಷಿಕ ಸಮುದಾಯದವರಿಗೆ ಮಹಾಪ್ರಾಣಗಳಿಂದಾಗಿ ಉಂಟಾಗುತ್ತಿರುವ ತೊಡಕುಗಳನ್ನು ಬಗೆಹರಿಸಬಹುದು. ಹಾಗೆಯೇ ಕನ್ನಡ ಪದಗಳಲ್ಲಿರುವ **'ಐ'** ಅನ್ನು **'ಅಯ್'** ಆಗಿ ಮತ್ತು **'ಔ'** ಅನ್ನು **'ಅವ್'** ಆಗಿ ಕೂಡ ಅಳವಡಿಸಿಕೊಳ್ಳುವುದರಿಂದ ಕನ್ನಡ ಬರಹದಲ್ಲಿ ಹೊಸದಾದ ವೈಜ್ಞಾನಿಕವಾದ ಆಲೋಚನೆಗಳನ್ನು ಬಳಸಿ ಕನ್ನಡ ಬರಹವನ್ನು ಸುಲಭವಾಗಿ ತಿಳಿಯಬಹುದು. ಕನ್ನಡ

ಬರಹವೂ ಉನ್ನತ ವರ್ಗದವರ ಪಾಲಿಗೆ ಮಾತ್ರ ಉಳಿಯದೆ ಎಲ್ಲರ ಕನ್ನಡವಾಗಬೇಕು. ಇದರಿಂದ ಎಲ್ಲಾ ವರ್ಗದವರು ಎಲ್ಲಾ ರೀತಿಯ ಉಪಯೋಗಗಳನ್ನು ಪಡೆಯಬೇಕು. ಈ ರೀತಿ ಎಲ್ಲಾ ಗುಂಪಿನ ಜನರಿಗೂ ಎಲ್ಲರ ಕನ್ನಡವಾಗಲೂ ಎಲ್ಲಾ ಕನ್ನಡ ಭಾಷಿಕ ಸಮುದಾಯದವರು ಮೊದಲು ಓದಲು – ಬರೆಯಲು ಕಲಿಯುವಂತೆ ಮಾಡಬೇಕು. ಇದರಿಂದ ಆಗುವ ಉಪಯೋಗಗಳ ಬಗ್ಗೆಯೂ ಅವರಿಗೆ ಅರಿವಿರಬೇಕು.

ಕೆಳವರ್ಗದ ಜನರ ಬಡತನ ಹಾಗೂ ಅರಿವಿನಕೊರತೆಯಿಂದ ಭಾಷೆಯೂ ಹಲವಾರು ತೊಡಕುಗಳನ್ನು ಎದುರಿಸುತ್ತಿದೆ. ಇಂತಹ ಸಾಮಾಜಿಕ ತೊಡಕುಗಳು ಮಾತ್ರವಲ್ಲದೆ ಇವತ್ತು ನಾವು ಉಪಯೋಗಿಸುವ ಕನ್ನಡ ಬರಿಗೆಯ ಸ್ವರೂಪವೂ ಕೆಳವರ್ಗದ ಜನರನ್ನು ಬರಹದ ಕಲಿಕೆಯಿಂದ ದೂರವಿರುವಂತಹ ಸನ್ನಿವೇಶಗಳೂ ಸೃಷ್ಟಿಯಾಗಿದೆ ಕಾರಣವೆಂದರೆ ಪ್ರತಿದಿನವೂ ಬರಿಗೆಯೂ ಸಾಮಾನ್ಯ ಜನರ ಮಾತಿನಿಂದ ಹೆಚ್ಚು ಹೆಚ್ಚು ಭಿನ್ನವಾಗುವುದರಿಂದ ಆಡು ಮಾತಿನಲ್ಲಿ ಬಳಸುವ ಪದಗಳಿಗೂ ಕನ್ನಡ ಬರಿಗೆಯಲ್ಲಿ ಬಳಸುವ ಪದಗಳಿಗೆ ಹಲವಾರು ವ್ಯತ್ಯಾಸಗಳನ್ನು ಕಾಣಬಹುದು. ಇದರಿಂದ ಕನ್ನಡ ಭಾಷೆಯೂ ಕೆಳವರ್ಗದವರಿಗೆ ಬರಹವೂ ಒಂದು ಜಟಿಲ ಸಮಸ್ಯೆಯಾಗಿದೆ ಈ ಭಾವನೆಯನ್ನು ಹೋಗಲಾಡಿಸಿ ಆಡುಮಾತಿಗೂ ಬರಹದ ಭಾಷೆಗೂ ಇರುವಂತಹ ಅಂತರವನ್ನು ಕಡಿಮೆಗೊಳಿಸಬೇಕು.

ಕನ್ನಡದ ಪದಗಳನ್ನು ಬರೆಯಲು ಮೂವತ್ತೆರಡು ಅಕ್ಷರಗಳು ಸಾಕು ಆದರೆ ನಾವು ಉಪಯೋಗಿಸುವ ಅಕ್ಷರಗಳು ಐವತ್ತು ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳನ್ನು ಕನ್ನಡ ಬರಿಗೆಯಲ್ಲಿ ನಾವು ಉಲಿಯುವ ಹಾಗೆ ಬರೆಯುವ ಬದಲು, ಸಂಸ್ಕೃತದಲ್ಲಿರುವ ಹಾಗೆಯೇ ಬರೆಯಬೇಕೆಂಬ ನಿಯಮಗಳಿಂದ ಐವತ್ತು ಅಕ್ಷರಗಳನ್ನು ಉಪಯೋಗಿಸುವುದರಿಂದ ಕನ್ನಡ ಬರಿಗೆಯನ್ನು ಕಲಿಸಲು ಹಲವಾರು ತೊಂದರೆಗಳು ಸೃಷ್ಟಿಯಾಗುತ್ತದೆ.

ಹಾಗೆಯೇ ಕನ್ನಡ ಬರಿಗೆಯಲ್ಲಿ ಕನ್ನಡ ಪದಗಳಿಗಿಂತ ಹೆಚ್ಚಾಗಿ ನಾವು ಸಂಸ್ಕೃತ ಪದಗಳನ್ನು ಬಳಸುವುದು ರೂಢಿಗತವಾಗಿದೆ. ಇದಲ್ಲದೆ ಸಂಸ್ಕೃತ ಪದಗಳನ್ನು ಹೇಗಿದೆಯೋ ಹಾಗೆಯೇ ಉಳಿಸುವ ಪ್ರಯತ್ನವೂ ನಡೆದಿದೆ. ಕೆಳವರ್ಗ ಜನರ

ಭಾಷೆಗಳಲ್ಲಿ ಸಂಸ್ಕೃತ ಪದಗಳ ಬಳಕೆಯನ್ನು ಕಡಿಮೆ ಕಾಣುತ್ತೇವೆ. ಆದ್ದರಿಂದ ಬರಹವೂ ಆಡುಮಾತಿಗಿಂತ ಬೇರೆಯಾಗಿ ಗೋಚರಿಸುತ್ತದೆ. ಹಾಗೆಯೇ ಕಲಿಕೆಯಿಂದ ದೂರ ಉಳಿಸುತ್ತದೆ.

ಕನ್ನಡ ಬರಹವೂ ಕನ್ನಡಿಗರ ಸೊತ್ತಾಗಬೇಕು. ಇದನ್ನು ಸರಿಪಡಿಸಲು ಸಂಶೋಧನೆಯ ಜೊತೆಗೆ ಬದಲಾವಣೆಗಳು ಆಗಬೇಕು. ಕನ್ನಡ ಬರಹಕ್ಕೆ ಅಗತ್ಯವಿರುವ ಅಕ್ಷರಗಳನ್ನು ಮಾತ್ರ ಉಪಯೋಗಿಸಿ ಹೊಸ ಬರಹವನ್ನು ಅಳವಡಿಸಿ ಕನ್ನಡದ ಪದಗಳನ್ನೇ ಬಳಸಲು ರೂಢಿಯಾಗಬೇಕು. ಕನ್ನಡ ಪದಗಳ ಬದಲು ಸಂಸ್ಕೃತ ಪದಗಳನ್ನು ಅಂದರೆ **"ತತ್ಸಮದ ಬದಲು ತದ್ಭವ ಪದಗಳನ್ನು ಬಳಸಿ ಅಕ್ಷರಕ್ರಾಂತಿಯಾಗಬೇಕೆಂದು ಡಿ.ಎನ್. ಶಂಕರ ಭಟ್ಟರು ಹೇಳುತ್ತಾರೆ".** ಮಾತಿಗಿಂತ ಬರಹವೂಮುಖ್ಯವಾದವು ಮಾತೆಂಬುದು ತಾತ್ಕಾಲಿಕವಾದುದು ಉಲಿದಕ್ಷಣದಲ್ಲೇ ಅದು ಇಲ್ಲವಾಗುತ್ತದೆ. ಆದರೆ ಬರಹಕ್ಕೆ ನಾಶವೆಂಬುದು ಇಲ್ಲ ಬರೆದವನ ಮರಣದ ನಂತರವೂ ಬರಹವೂ ಉಳಿದಿರುತ್ತದೆ. ಮಾತನ್ನು ಅಲ್ಲಗಳೆಯುವ ಹಾಗೆ ಬರಹವನ್ನು ಅಲ್ಲಗೆಳೆಯಲು ಸಾಧ್ಯವಿಲ್ಲ ಆದ್ದರಿಂದ ಅಕ್ಷರ ನಾಶವಿಲ್ಲದ್ದು ಎಂದು ಕರೆಯುವುದು.

ಮಾತಿಗೆ ಸಮಯದ ಮಿತಿಯಿದೆ ಎಲ್ಲೆಯ ಮಿತಿಯಿದೆ ಮಾತು ತಲುಪದ ಜಾಗದಲ್ಲಿಯೂ ಬರಹವೂ ತಲುಪುತ್ತದೆ. ಕನ್ನಡಕ್ಕೆ ಸಂಸ್ಕೃತ ಮೂಲವಲ್ಲ ಕನ್ನಡದ ಬರಹಗಾರರಿಗೆ ತಮ್ಮ ಬರಿಗೆಗಳಲ್ಲಿ ಹೆಚ್ಚು ಹೆಚ್ಚು ಸಂಸ್ಕೃತ ಪದಗಳನ್ನು ಬಳಸುವುದು ಮತ್ತು ಅಂತಹ ಪದಗಳನ್ನು ಸಂಸ್ಕೃತದಲ್ಲಿಯೇ ಬರೆಯುವ ಚಾಳಿ ಇದೆ. ಇದಕ್ಕೆ ಮೂಲಕಾರಣ ಚರಿತ್ರೆಯಲ್ಲಿ ಸಂಸ್ಕೃತ ಭಾಷೆಗೆ ನೀಡಿದ ಅಪಾರ ಸ್ಥಾನವೇ ಕಾರಣ ಕನ್ನಡ ಬರಹವೂ ಹಿಂದಿನಿಂದಲೂ ಸಂಸ್ಕೃತ ಪ್ರಭಾವದಲ್ಲಿಯೇ ಬೆಳೆದು ಬಂದಿದೆ.

ಕನ್ನಡವನ್ನು ಬರಿಗೆಯ ರೂಪದಲ್ಲಿ ಬಳಸುವ ಲಿಪಿಯ ಸಂಸ್ಕೃತ ಬರಹಗಳಿಗೆ ಮೂಲವಾದ ಲಿಪಿಯೇ ಬ್ರಾಹ್ಮೀ ಲಿಪಿಯಾಗಿದೆ. ಈ ಕಾರಣದಿಂದ ಕನ್ನಡ ಬರವಣಿಗೆಯಲ್ಲಿ ಪದಗಳನ್ನು ಬರೆಯಲು ಅಗತ್ಯವಿರುವ ಅಕ್ಷರಗಳಲ್ಲದೆ ಸಂಸ್ಕೃತ ಪದಗಳಿಗೆ ಬೇಕಾಗಿರುವ ಅಕ್ಷರಗಳನ್ನು ಹಾಗೆಯೇ ಉಳಿಸಿಕೊಂಡಿರುವುದರಿಂದ ಕನ್ನಡ ಭಾಷೆಯಲ್ಲಿ ಹೆಚ್ಚು ಸಂಸ್ಕೃತ ಪದಗಳ ಬಳಕೆಯೂ ಅಧಿಕವಾಗಿದೆ. ಇದರಿಂದ

**"ಕನ್ನಡ ಭಾಷೆಗೆ ಸಂಸ್ಕೃತ ಮೂಲವೆಂದೇ ಪರಿಗಣಿಸಿರುವ ಪರಿಕಲ್ಪನೆಯೇ ತಪ್ಪು ಎಂದು ನುಡಿಯರಿಗರ ವಾದವಾಗಿದೆ".**

ಇದರಿಂದ ಕನ್ನಡ ಭಾಷೆಯಲ್ಲಿನ ಸಂಸ್ಕೃತಪದಗಳಿಗೆ ಹೆಚ್ಚಿನ ಮುಖ್ಯತ್ವವೂ ದೊರೆಯಿತು. ಇಂಗ್ಲೀಷ್, ಪರ್ಷಿಯನ್, ತಮಿಳು, ಇತರ ಭಾಷೆಗಳ ಪದಗಳನ್ನು ಉಲಿಯುವಂತೆ ಬರೆಯುತ್ತೇವೆ. ಆದರೆ ಸಂಸ್ಕೃತ ಭಾಷೆಯ ಪದಗಳನ್ನು ಹಾಗೆ ಬರೆಯಲು ಒಪ್ಪುವುದಿಲ್ಲ. ಸಂಸ್ಕೃತ ಪದಗಳನ್ನು ಹೆಚ್ಚು ನಾವು ಸಂಸ್ಕೃತ ಬರಹದ ಹಾಗೆಯೇ ಬರೆಯುತ್ತೇವೆ. ಎತ್ತುಗೆಗಾಗಿ ವಿಶೇಷ ಬರಹದ ಹಾಗೆಯೇ ಬರೆಯುತ್ತೇವೆ.
**ಎತ್ತುಗೆಗಾಗಿ;**ವಿಶೇಷ ಎಂಬುದನ್ನು ವಿಶೇಶವೆಂದು ಓದುತ್ತೇವೆ. ಆದರೆ ಬರೆಯುವಾಗ ವಿಶೇಷವೆಂದು ಬರೆಯುತ್ತೇವೆ.

ಸುಮಾರು ಎರಡು ಸಾವಿರ ವರ್ಷಗಳ ಹಿಂದೆ ಕನ್ನಡ ಭಾಷೆಗೆ ಬ್ರಾಹ್ಮೀ ಲಿಪಿಯನ್ನು ಅಳವಡಿಸುವಾಗ ಕನ್ನಡ ಬರಹದಲ್ಲಿ ಸಂಸ್ಕೃತದ ಪದಗಳನ್ನು ಹಾಗೆಯೇ ಬರೆದು ಬಳಸಲು ಆರಂಭಿಸಿದರು. ಈ ಕ್ರಮವನ್ನು ಪರಂಪರೆಯಿಂದ ಪರಂಪರೆಗೆ ಯಾವುದೇ ಬದಲಾವಣೆಗಳಿಗೂ ಹಾಗೂ ವೈಜ್ಞಾನಿಕ ಆಲೋಚನೆಗೂ ಒಳಗಾಗದೇ ಹಾಗೆಯೇ ಉಳಿಸಿ ಬೆಳಸಿಕೊಂಡು ಬಂದಿರುವುದನ್ನು ನಾವು ಗಮನಿಸಬಹುದು. ಈ ಎಲ್ಲಾ ಕಾರಣಗಳಿಂದ ಕನ್ನಡ ನುಡಿ ಸಂಸ್ಕೃತದ ಒಂದು ವಿಕೃತ ರೂಪ ಎಂಬ ಅನಿಸಿಕೆ ಕನ್ನಡ ವಿದ್ವಾಂಸರಲ್ಲಿತ್ತು. ಇದನ್ನು ಬಳಸುವಾಗ ವಿಕೃತ ಗೊಳಿಸಿದರೆ ಶುದ್ಧ ರೂಪದಲ್ಲಿ ಉಳಿಸಬೇಕೆಂಬ ಆಶಯವಿತ್ತು.

ಸಂಸ್ಕೃತ ಭಾಷೆಯೂ ಇಂಡೋ ಯುರೋಪಿಯನ್ ಎಂಬ ಭಾಷಾ ಕುಟುಂಬಕ್ಕೆ ಸೇರಿದೆ ಆದರೆ ಕನ್ನಡ ಭಾಷೆಯೂ ದ್ರಾವಿಡ ನುಡಿ ಕುಟುಂಬಕ್ಕೆ ಸೇರಿದೆ ಎಂಬ ತೀರ್ಮಾನಕ್ಕೆ ೧೯ನೇ ಶತಮಾನದ ನಂತರ ನಡೆದ ಸಂಶೋಧನೆಯ ಆಧಾರ ಮೇಲೆ ತಿಳಿಯಬಹುದು. ಆದರೆ ಕನ್ನಡ ಭಾಷೆಗೆ ಸಂಸ್ಕೃತ ಮೂಲವೆಂಬ ವಾದಕ್ಕೆ ಆಧಾರವೂ ಯಾವುದೂ ಇಲ್ಲ ಇದರ ಸಂಶೋಧನೆಯೂ ಇದುವರೆಗೆ ನಡೆದಿಲ್ಲವೆಂದು ಇದು ವಿದ್ವಾಂಸರ ಗಾಢವಾದ ನಂಬಿಕೆಯೆಂದು ನುಡಿಯರಿಗರು ವಾದಿಸುತ್ತಾರೆ. ಈ ನಂಬಿಕೆಯನ್ನು ಬಿಟ್ಟು ಕನ್ನಡ ಮತ್ತು ಸಂಸ್ಕೃತ ಭಾಷೆಗಳೂ ಸ್ವತಂತ್ರ ನುಡಿಗಳೆಂದು ಭಾವಿಸಿ ಕನ್ನಡ

ಬರಿಗೆಗೆ ಹೊಸ ರೂಪವನ್ನು ಕೊಟ್ಟು ಕನ್ನಡ ಭಾಷೆಯನ್ನು ಸುಲಭವಾಗಿಸಿ ಎಲ್ಲರ ಕನ್ನಡವಾಗಿಸಿ ಭಾಷೆಯ ಜೀವಂತಿಕೆಗೆ ಶ್ರಮಿಸಬೇಕಿದೆ.

ಮಹಾಪ್ರಾಣಾಕ್ಷರಗಳನ್ನು ಒಳಗೊಂಡ ಪದಗಳನ್ನು ಉಲಿಯುವಾಗ ತುಂಬಾ ಮಂದಿ ಅಲ್ಪಪ್ರಾಣಾಕ್ಷರಗಳಾಗಿಯೇ ಉಚ್ಚರಿಸುತ್ತಾರೆ. **ಕ.ಚ.ಟ.ತ.ಪ** ಮತ್ತು **ಗ.ಜ.ಡ.ದ.ಬ** ಎಂಬುದಾಗಿ ಉಚ್ಚರಿಸುತ್ತಾರೆ. ಕನ್ನಡ ಬರಹಗಳಲ್ಲಿ ಬಳಕೆಯಾಗುವ **ಋ.ಷ.** ಅಕ್ಷರಗಳ ಬದಲಿಗೆ **ರು.ಶ** ಎಂದು ಉಚ್ಚರಿಸುತ್ತಾರೆ. **ವಿಷ ಎಂಬುದನ್ನು ವಿಶವೆಂದೂ, ಬಹುಶಃ ಎಂಬುದನ್ನೂ ಬಹುಶಹವೆಂದು, ಉಚ್ಚರಿಸುವುದನ್ನೂ ನಾವು ಗಮನಿಸಬಹುದು.** ಕನ್ನಡ ಬರಿಗೆಯಲ್ಲಿ ಬಳಸುವ ಸಂಸ್ಕೃತ ಪದಗಳನ್ನು ನಾವು ಉಚ್ಚಾರಣೆಯ ಅನುಸಾರ ಬರೆಯಲು ಪ್ರಾರಂಭಿಸುವಾಗ ಕನ್ನಡ ಬರಹಗಳಲ್ಲಿ ಖಂಡಿತವಾಗಿಯೂ ಉಪಯೋಗಿಸಬೇಕೆಂದು ಕಟ್ಟಳೆ ಇರುವ ಅಕ್ಷರಗಳ ಸಂಖ್ಯೆಯನ್ನು ಕಡಿಮೆ ಮಾಡಿ ಕಲಿಕೆಯನ್ನು ಸುಲಭಗೊಳಿಸಬಹುದು ಹಾಗೂ ಬರಿಗೆಯಲ್ಲಿಯೂ ವೈಜ್ಞಾನಿಕವಾದ ಮಾರ್ಪಾಡುಗಳನ್ನು ಮಾಡಿ ಕನ್ನಡ ಬರಿಗೆಯನ್ನು ಎಲ್ಲಾ ವರ್ಗದ ಜನರಿಗೂ ಎಟುಕುವ ಹಾಗೆ ಮಾಡಬಹುದು ಎಂದು ಭಾಷಾ ವಿಜ್ಞಾನಿಗಳ ಅಭಿಪ್ರಾಯವಾಗಿದೆ.

ಸಂಸ್ಕೃತದಿಂದ ಪಡೆದ ಪದಗಳನ್ನು ಕನ್ನಡ ಭಾಷೆಯ ಸ್ವರೂಪಕ್ಕೆ ಸರಿಹೋಗುವ ಹಾಗೆ ನಾವು ಬದಲಾಯಿಸಿ ಕೊಂಡಿದ್ದೇವೆ. ಸಂಸ್ಕೃತದ ಲಿಂಗಬೇಧವನ್ನು ಕನ್ನಡ ನುಡಿಯ ಲಿಂಗಬೇಧಕ್ಕೆ ಹೊಂದಿಕೆಯಾಗುವ ರೀತಿಯಲ್ಲಿ ನಮ್ಮದೇ ಆದ ಹಲವಾರು ಬದಲಾವಣೆಗಳನ್ನು ಕನ್ನಡ ಭಾಷಿಕರೂ ಬದಲಾಯಿಸಿರುವ ಹಾಗೆ ಸಂಸ್ಕೃತ ಪದಗಳಲ್ಲಿ ಇಲ್ಲದಿರುವಂತಹ ನಾಮಪದ, ಗುಣಪದದ ಭಿನ್ನತೆಯನ್ನು ನಾವು ಪದಗಳ ಮೇಲೆ ಹೊರಿಸಿದ್ದೇವೆ. ಕ್ರಿಯಾಪದಗಳಿಗೆ ಇಸು ಪ್ರತ್ಯಯಗಳನ್ನು ಸೇರಿಸಿ ಅರ್ಥದಲ್ಲಿ ಹಲವಾರು ಬದಲಾವಣೆಯನ್ನು ಮಾಡಿದ್ದೇವೆ. ಹೀಗಾಗಿ ಕನ್ನಡ ಭಾಷೆಯಲ್ಲಿನ ಸ್ವತಂತ್ರ ಸಂಸ್ಕೃತಿಯನ್ನು ಸೂಚಿಸುತ್ತಾ ಸಂಸ್ಕೃತ ಭಾಷೆಯ ಅಧೀನದಿಂದ ಹೊರಗುಳಿದು ತನ್ನತನವನ್ನು ಉಳಿಸಿಕೊಳ್ಳಲು ಕನ್ನಡ ಭಾಷಿಕ ಸಮುದಾಯದವರು ಪ್ರಯತ್ನಿಸುತ್ತಿರುವುದು ಗಮನಾರ್ಹವಾದ ವಿಷಯವಾಗಿದೆ.

ನಾವು ನಮ್ಮ ಮನದಲ್ಲಿ ಮೂಡಿದ ಭಾವನೆಗಳನ್ನು ಹಾಗೂ ಅನಿಸಿಕೆಗಳನ್ನು ಎಲ್ಲಾ ಸಂದರ್ಭದಲ್ಲಿಯೂ ಮಾತಿನ ಮೂಲಕ ತಿಳಿಸಲು ಸಾಧ್ಯವಿಲ್ಲ. ಆದ್ದರಿಂದ ಬರಹವನ್ನು ಇಲ್ಲಿ ಒಂದು ಮಾಧ್ಯಮವಾಗಿಯೇ ಬಳಸುತ್ತೇವೆ. ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳನ್ನು ಕನ್ನಡ ಬರಿಗೆಯಲ್ಲಿ ಹಾಗೆಯೇ ಬರೆಯುವ ಮೂಲಕ ನಾವು ಬರಹಕ್ಕೆ ತೊಡಕನ್ನು ಉಂಟು ಮಾಡುತ್ತಿದ್ದೇವೆ.

ಹೀಗೆ ಆಗಲು ಕನ್ನಡದ ಕೆಲವು ಬರಹಗಾರರಿಗೆ ಸಂಸ್ಕೃತದ ಮೇಲಿರುವ ಕುರುಡು ಅಭಿಮಾನವೇ ಕಾರಣವೆಂದೂ ಡಿ.ಎನ್. ಶಂಕರ್‌ಭಟ್‌ರವರು ಹೇಳುತ್ತಾರೆ. ಕಳೆದ ಸಾವಿರ ವರ್ಷಗಳಲ್ಲಿ ಕನ್ನಡದ ಪದಗಳಲ್ಲಿಯೇ ಮಹತ್ತರವಾದ ಬದಲಾವಣೆಗಳೂ ಕಂಡು ಬಂದಿದೆ ಇದಕ್ಕೆ ಅನುಸಾರವಾಗಿ ಬರಿಗೆಯೂ ಬದಲಾಗಿದೆ ಎಂದು ತೋರಿಸಿ ಕೊಟ್ಟಿದ್ದಾರೆ.

**ಉದಾ:** ಅಲು–ಅಳು, ಏಲು–ಏಳು, ಪ, ಕಾರ ಹ, ಕಾರವಾಗಿದೆ ಪಾಲ್– ಹಾಲು, ಪಲ್–ಹಲ್ಲು ಹಾಗೂ ಉದ್ದಸ್ವರದ ನಂತರ ಬರುತ್ತಿದ್ದ ಅನುಸ್ವಾರ (ಸಬಿಂದುಕಗಳು ) ಅಕ್ಷರಗಳು ಅಂದರೆ ದಾಂಟು–ದಾಟು, ನಾಂಟು–ನಾಟು ಹಾಗೂ ದುಃಖ ಇದಕ್ಕೆ ದುಕ್ಕ, ಪುನಃ ಇದಕ್ಕೆ ಪುನಾ ಎಂದು ಬರೆಯಬಹುದು. ಇದು ಕನ್ನಡ ಉಚ್ಚಾರಣೆಯ ಜಾಯಮಾನಕ್ಕೆ ಹೊಂದಿಕೊಳ್ಳುತ್ತದೆ ಎಂಬುದು ಬಹಳ ಮುಖ್ಯವಾದುದನ್ನು ಗಮನಿಸಬಹುದು.

ಪದದ ಕೊನೆಯಲ್ಲಿ ಬರುವ ವ್ಯಂಜನ ಬಿಟ್ಟು ಹೋಗಿದೆ ಹೋದನು– ಹೋದ ಇವಲ್ಲದೇ ವ್ಯಂಜನದ ಮುಂದೆ ಸ್ವರವೂ ಸೇರಿ ದ್ವಿತ್ವ ಅಕ್ಷರವಾಗಿದೆ. ಬೆನ್–ಬೆನ್ನು, ಪೊನ್–ಹೊನ್ನು, ಪೆಣ್–ಹೆಣ್ಣು ಹೀಗೆ ಬದಲಾವಣೆಗೆ ಒಳಗಾಗಿದೆ. ಇಂತಹ ಬದಲಾವಣೆಗಳಿಂದ ಕನ್ನಡ ಬರಿಗೆಗೂ ಆಡುಮಾತಿಗೂ ಅಂತರವನ್ನು ಕಡಿಮೆ ಮಾಡಿರುವುದು ಕನ್ನಡ ಭಾಷೆಯ ಶ್ರೇಷ್ಠತೆಯಾಗಿದೆ. ಹೀಗೆ ಕನ್ನಡ ಪದಗಳ ಸ್ವರೂಪವೂ ಬದಲಾದಾಗ ಕನ್ನಡ ವಿದ್ವಾಂಸರು ಯಾವುದೇ ವಾದ–ವಿವಾದಗಳನ್ನು ಮಾಡಿಲ್ಲ.

ಸಂಸ್ಕೃತ ಪದಗಳನ್ನು ಕನ್ನಡ ಭಾಷೆಯಲ್ಲಿ ಬರೆಯುವಾಗ ಯಾವುದೇ ಬದಲಾವಣೆಗಳನ್ನು ಮಾಡಬಾರದೆಂಬ ಕಟ್ಟಳೆಯಿಂದ ಹಾಗೂ ಸಂಸ್ಕೃತದ ಮೇಲಿನ ಕುರುಡು ವ್ಯಾಮೋಹದಿಂದ ಎರಡು ಸಾವಿರ ವರ್ಷಗಳ ಹಿಂದೆ ಇದ್ದ ಅದೇ ರೂಪವನ್ನು ಉಳಿಸಿ ಬಳಸಬೇಕೆಂದು ವಾದಿಸುವ ವಿದ್ವಾಂಸರು ಇದ್ದಾರೆ. ಇದರಿಂದ ಕನ್ನಡ ಭಾಷೆಯಲ್ಲಿ ಕನ್ನಡ ಪದಗಳಿಗಿಂತ ಹೆಚ್ಚಾಗಿ ನಾವು ಸಂಸ್ಕೃತ ಪದಗಳನ್ನು ಕಾಣಬಹುದು ಕನ್ನಡ ಬರಹದಲ್ಲಿನ ಸಂಸ್ಕೃತ ಪದಗಳೂ ಉನ್ನತ ವರ್ಗದವರಿಗೆ ಕಷ್ಟವಾಗುವುದಿಲ್ಲ. ಆದರೆ ಕೆಳವರ್ಗದವರಿಗೆ ಕಷ್ಟವಾಗುತ್ತದೆ. ಕನ್ನಡ ಬರಹದಲ್ಲಿ

ಅವಶ್ಯವಿಲ್ಲದ ಅಕ್ಷರಗಳನ್ನು ತೆಗೆದುಹಾಕಿ ಹೊಸ ಬರಹ ಇದನ್ನು ಕನ್ನಡದಲ್ಲಿ ಬಳಸುವ ಬಗೆ ಹೇಗೆ ಇದರಿಂದ ಆಗುವ ಉಪಯೋಗವೇನು? ಇದರಿಂದ ಬರಹ ಕಲಿತಿರುವ ಜನರಿಗೆ ಹಳೆ ಬರಹಗಳಲ್ಲಿ ಪ್ರಕಟವಾದ ಒತ್ತುಗೆಯನ್ನು ಓದಲು ಉಂಟಾಗುವ ಕಷ್ಟಗಳನ್ನು ಹೇಗೆ ಎದುರಿಸಬೇಕೆಂದು ಇದಕ್ಕೆ ಪರಿಹಾರವನ್ನು ಪರಿಶೀಲಿಸಿ ಡಿ.ಎನ್. ಶಂಕರಭಟ್‌ರು ತಮ್ಮ ವೈಜ್ಞಾನಿಕ ಸಂಶೋಧನೆಗಳ ಮೂಲಕ ತಿಳಿಸಿದ್ದಾರೆ.

ಕನ್ನಡ ಬರಹದ ಮೇಲೆ ಸಂಸ್ಕೃತ ಪದಗಳನ್ನು ಹೆಚ್ಚಾಗಿ ಬಳಸದೆ ಕನ್ನಡದ ಹೊಸ ಹೊಸ ಪದಗಳನ್ನು ಸೃಷ್ಠಿಸಿಕೊಂಡು ಬಳಸುವುದು ಅನಿವಾರ್ಯವಾಗಿದೆ. ಸಂಸ್ಕೃತ ಪದ ಹಾಗೂ ಪ್ರತ್ಯಯಗಳನ್ನು ಮಿತಗೊಳಿಸಿದರೆ ಕನ್ನಡ ಬರಹದ ಸ್ವರೂಪವೇ ಬದಲಾಗುತ್ತದೆ. ಹೊಸ ಪದಗಳನ್ನು ಸೃಷ್ಠಿಸುವ ಜಾಗದಲ್ಲಿ ಸಂಸ್ಕೃತ ಭಾಷೆಗೆ ಮೊರೆ ಹೋಗುತ್ತಾರೆ ಹಾಗೂ ವಿಜ್ಞಾನ ಬರಹಗಳಿಗೂ, ಶಾಸ್ತ್ರೀಯ ಬರಹಗಳಿಗೂ, ಪಾರಿಭಾಷಿಕ ಪದಗಳನ್ನು ತುಂಬಾ ಬಳಸುವುದರಿಂದ ಕನ್ನಡ ಭಾಷೆಗೆ ತುಂಬಾ ತೊಡಕಾಗಿದೆ. ಇಂಗ್ಲೀಷ್ ನುಡಿಯ ಪದಗಳನ್ನು ಕನ್ನಡಕ್ಕೆ ಅನುವಾದಿಸುವಾಗ ಕನ್ನಡ ಪದಗಳಲ್ಲಿ ಹೆಚ್ಚು ತೊಡಗು ಕಾಣಿಸುವುದಿಲ್ಲ, ಕೆಲವು ವೇಳೆ ಸಂಸ್ಕೃತದಲ್ಲಿಯೂ ಪದಗಳು ದೊರೆಯದೆ ಹೋದಾಗ ಮೂಲ ಇಂಗ್ಲಿಷ್ ಹಾಗೂ ಲ್ಯಾಟಿನ್ ಭಾಷೆಯ ಪದಗಳನ್ನು ಎರವಲು ಪಡೆಯುವಾಗ ಹಲವಾರು ತೊಂದರೆಗಳಿಗೆ ಒಳಗಾಗುತ್ತದೆ.

ಹೊಸ ಬರಹದ ಸ್ವರೂಪವನ್ನು ಮತ್ತು ಅದರ ಗುರಿಯನ್ನು ತಲುಪಲು ನಾವು ಸಂಸ್ಕೃತದಲ್ಲಿರುವ ಹಾಗೆಯೇ ಬರೆಯಬೇಕೆಂಬ ನಿರ್ಬಂಧವನ್ನು ಹೋಗಲಾಡಿಸಬೇಕು. ಹೀಗೆ ಮಾಡಿದಾಗ ಹೆಚ್ಚಿನ ಅಕ್ಷರಗಳು ಕನ್ನಡ ಬರಹಕ್ಕೆ ಅವಶ್ಯಕತೆ ಹಾಗೂ ಕಡ್ಡಾಯವಾಗಲಾರದು. ಮಹಾಪ್ರಾಣಾಕ್ಷರಗಳನ್ನು ಹೆಚ್ಚಿನ ಕನ್ನಡಿಗರೂ ಅಲ್ಪಪ್ರಾಣಾಕ್ಷರಗಳಾಗಿ ಉಚ್ಚರಿಸುತ್ತಾರೆ. ಆದ್ದರಿಂದ ಪದಗಳನ್ನು ಬರೆಯುವಾಗ ಅಲ್ಪಪ್ರಾಣಾಕ್ಷರಗಳಾಗಿಯೇ ಬರೆಯಲು ಸಾಧ್ಯವಾಗಬೇಕು ಮತ್ತು ಕನ್ನಡದಲ್ಲಿ ಕಡ್ಡಾಯವಾಗಿ ಬಳಕೆಯಾಗುತ್ತಿರುವ ಅಕ್ಷರಗಳನ್ನು ಬಿಡುವುದು ಹಳೆ ಬರಹದ ಪದಗಳನ್ನು ಹೊಸ ಬರಹವಾಗಿ ಬರೆಯುವುದು.

**ಉದಾ :** ಮುಖ್ಯ–ಮುಕ್ಯ, ಇಚ್ಛೆ–ಇಚ್ಚೆ, ಪಾಠ–ಪಾಟ, ನಿಷ್ಠೆ–ನಿಶ್ಟೆ, ಕಥೆ–ಕತೆ, ಸಂಸ್ಥೆ–ಸಂಸ್ತೆ, ಸಫಲ–ಸಪಲ, ದೃಢ–ದ್ರುಡ, ಭ್ರಮೆ–ಬ್ರಮೆ, ಆಧಾರ–ಆದಾರ, ಋಷಿ–ರುಶಿ, ವಿಷ–ವಿಶ, ದುಃಖ–ದುಕ್ಕ, ಔತಣ–ಅವುತಣ, ಐಹಿಕ – ಅಯ್ಹಿಕ, ಸಿಂಹ –

ಸಿಮ್ಹ, ಕೌರವ-ಕವ್ರವ ಹೀಗೆ ಕನ್ನಡದ್ದೇ ಪದಗಳನ್ನು ಬಳಸಬಹುದು. ಕನ್ನಡ ಬರವಣಿಗೆಯಲ್ಲಿ ಐ (ಅ+ಇ) ಮತ್ತು ಔ (ಅ+ಎ)ಸಂಧ್ಯಕ್ಷರಗಳು ಗಳೆಂಬ ಎರಡು ಸ್ವರಗಳು ಅಗತ್ಯವಿಲ್ಲ. ನಾವುಗಳ ಉಚ್ಚರಣೆಯಲ್ಲಿ ನಾವು ಐ ಅನ್ನು ಅಯ್ ಮತ್ತು ಔ ಅನ್ನು ಅವ್ ಎಂಬುದಾಗಿ ಹೇಳುತ್ತೇವೆ ಆದ್ದರಿಂದ ಐ ಮತ್ತು ಔ ಅಕ್ಷರಗಳನ್ನು ಹೊಸ ಬರವಣಿಗೆಯ ರೂಪದಲ್ಲಿ ಬಳಸುವ ಅಗತ್ಯವಿಲ್ಲವೆಂದು ಹೇಳುತ್ತಾರೆ.

ಎರಡು ಸಾವಿರ ವರ್ಷಗಳಿಂದಲೂ ಕನ್ನಡ ಭಾಷೆಯಲ್ಲಿ ಉಪಯೋಗಿಸುತ್ತಿರುವ ಮಹಾಪ್ರಾಣಾಕ್ಷರಗಳು, ಷ ಕಾರ, ಋ ಕಾರ, ಜ ಕಾರ, ಇ ಕಾರ ಮೊದಲಾದವನ್ನು ಸಂಪೂರ್ಣವಾಗಿ ಬಿಡಬೇಕೆಂದು ಹೇಳುತ್ತಿಲ್ಲ. ಇದರ ಬದಲಿಗೆ ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳನ್ನು ಬರೆಯುವಾಗ ಅದನ್ನು ಬಳಸಲೇಬೇಕು. ಇಲ್ಲವಾದರೆ ಅದು ತಪ್ಪು ಎಂದು ಹೇರುವ ಕಟ್ಟಳೆಯನ್ನು ಬಿಡಬೇಕು. ಒಂದು ವೇಳೆ ಮಹಾಪ್ರಾಣಾಕ್ಷರ ಬಳಸದಿದ್ದರೆ ಅದು ಬರಹಗಾರನ ಅಜ್ಞಾನವನ್ನು ಸೂಚಿಸುತ್ತದೆ ಎಂಬ ನಿಯಮವನ್ನು ವಿರೋಧಿಸುತ್ತಾ ಡಿ.ಎನ್. ಶಂಕರಭಟ್ಟರು ಈ ನಿಯಮಗಳ ವಿರುದ್ಧವಾದಿಸುತ್ತಾರೆ.

ನುಡಿಯ ಚರಿತ್ರೆಯೂ ತಿಳಿಯುವುದು. ಪ್ರತಿ ನಿತ್ಯದ ಮಾತಿನಿಂದ ಹೊರತು ಬರಹದಿಂದ ಅಲ್ಲ ಕನ್ನಡ ಭಾಷಿಕ ಸಮುದಾಯದವರ ಬರಹಕ್ಕಿಳಿಸುವ ಕಾರ್ಯ ಸುಮಾರು ಎರಡು ಸಾವಿರ ವರ್ಷಗಳಷ್ಟು ಹಿಂದೆ ನಡೆದಿರಬಹುದು ಬರಹವೂ ಸರಿಸುಮಾರು ಐದು ಸಾವಿರ ವರ್ಷಗಳಷ್ಟು ಹಳೆಯದಾಗಿರಬಹುದು ಎಂದು ಸಂಶೋಧನೆಗಳು ತಿಳಿಸುತ್ತವೆ.

ಇಂಗ್ಲೀಷ್ ಅಥವಾ ಚೈನೀಸ್ ಬರಹಕ್ಕೆ ಹೋಲಿಸಿದೆವಾದರೆ ಕನ್ನಡ ಬರಹವೂ ಸುಲಭವಾದುದು ಕಾರಣ ಇಂಗ್ಲೀಷ್‌ನಲ್ಲಿರುವ ಕಷ್ಟವಾದ ಪದಗಳ ಸ್ಪೆಲ್ಲಿಂಗ್ ಸಮಸ್ಯೆ ಹಾಗೂ ಚೈನೀಸ್ ಭಾಷೆಯಲ್ಲಿರುವ ಹಾಗೆ ಸಾವಿರಾರು ಅಕ್ಷರಗಳು ಕನ್ನಡ ಬರಹಕ್ಕೆ ಅವಶ್ಯಕತೆ ಇಲ್ಲ ಕನ್ನಡಕ್ಕೆ ೩೨ ಅಕ್ಷರಗಳನ್ನು ಬಳಸಿ ಬರೆಯುವ ಕನ್ನಡ ಬರಹವೇ ಸಾಕು ಎಂದು ಹೇಳುತ್ತಾರೆ. ಕಾಲದಿಂದ ಕಾಲಕ್ಕೆ ಮಾತು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಬದಲಾವಣೆಯಾಗುತ್ತದೆ.

ಮಕ್ಕಳು ಭಾಷೆಯನ್ನು ತಾವಾಗಿಯೇ ಕಲಿಯುತ್ತಾ ಹೋಗುತ್ತವೆ. ಮಾತನ್ನು ಅಂದರೆ ಆಡುನುಡಿಯನ್ನು ಮಕ್ಕಳು ಆಯಾ ಆಯಾ ಭಾಷಿಕ ಪರಿಸರದ ನಡುವೆ ಕಲಿಯುತ್ತವೆ. ಆದರೆ ಬರಹವನ್ನು ಮಕ್ಕಳು ಇನ್ನೊಬ್ಬರ ಅಥವಾ ಶಾಲೆಯ ಮೂಲಕ ಕಲಿಯುತ್ತವೆ. ಮಾತಿನಲ್ಲಿ ಬದಲಾವಣೆಗಳನ್ನು ಸುಲಭವಾಗಿ ಸ್ವೀಕರಿಸುತ್ತಾರೆ. ಆದರೆ ಬರಹ ರೂಪವನ್ನು ಬದಲಿಸಲು ಒಪ್ಪುವುದಿಲ್ಲ. ಹಾಗೂ ಬದಲಾಗದಂತೆ ಹೆಚ್ಚು ಜಾಗ್ರತೆಯಿಂದ ನೋಡಿಕೊಳ್ಳುತ್ತಾರೆ.

ಬರಹದಲ್ಲಿ ಬದಲಾವಣೆಯಾಗ ಬೇಕಾದರೆ ಬರಹಗಾರರು ಬುದ್ಧಿ ಹಾಗೂ ವೈಜ್ಞಾನಿಕವಾಗಿ ಬದಲಾವಣೆ ಮಾಡಲು ಯತ್ನಿಸಬೇಕು. ಹಳಗನ್ನಡವೂ ನಡುಗನ್ನಡವಾಗಿ ಬದಲಾಗಲು ದಾಸರು ಹಾಗೂ ವಚನಕಾರರ ಪ್ರಯತ್ನವಿರುವ ಹಾಗೆ ನಡುಗನ್ನಡ ಬರಹ ಹೊಸಗನ್ನಡವಾಗಿ ಬದಲಾಗಲು ಮೈಸೂರಿನ ಬರಹಗಾರರ ಪ್ರಯತ್ನಕಾರಣ ಹೀಗೆಯೇ ಬದಲಾಗುವ ಸನ್ನಿವೇಶಗಳಲ್ಲಿ ಬರಹವೂ ಸಾಮಾನ್ಯವಾಗಿ ಮಾತನ್ನು ಅನುಸರಿಸುತ್ತದೆ. ಅಂತಹದ್ದನ್ನು ವಚನಕಾರರು, ಕೀರ್ತನಕಾರರು ಬಳಸಿದ್ದು ಅದಾಗಲೇ ತಮ್ಮ ಸಮಾಜದಲ್ಲಿ ಜನರಾಡುತ್ತಿದ್ದ ಜನ ಭಾಷೆಯನ್ನು ಅವರು ಪ್ರತಿಮೆ ಮತ್ತು ಸಂಕೇತವಾಗಿ ಬಳಸುತ್ತಿದ್ದರು.

ಮಾತು ಸತತವಾಗಿ ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಮಾತು ಬದಲಾವಣೆಗೆ ಒಳಗಾಗುತ್ತದೆ. ಇದು ಒಂದು ಸ್ಥಳದಿಂದ ಇನ್ನೊಂದು ಸ್ಥಳದಲ್ಲಿ ನಡೆಯುವುದರಿಂದ ಪ್ರಾದೇಶಿಕ ಮತ್ತು ಸಾಮಾಜಿಕ ವ್ಯತ್ಯಾಸಗಳು ಕಂಡುಬಂದು ಈ ರೀತಿ ನಿರಂತರವಾಗಿ ಬದಲಾವಣೆಗೆ ಒಳಗಾಗುವುದರಿಂದ ಮಾತು ಜೀವಂತಿಕೆಯಿಂದ ಕೂಡಿರುತ್ತದೆ. ಆದರೆ **ಬರಹವೂ ಯಾವುದೇ ಬದಲಾವಣೆ ಆಗದ ಕಾರಣ ನಿಂತ ನೀರಿನ ಹಾಗೆ ಜಡತ್ವವನ್ನು ಪಡೆಯುತ್ತದೆ.**ಕನ್ನಡ ಬರಹವನ್ನು ನಾವು ಹೀಗೆ ವೈಜ್ಞಾನಿಕವಾಗಿ ಬದಲಾಯಿಸದರೆ ಈ ಹಿಂದೆಯೆ ಮುದ್ರಣವಾಗಿರುವ ಬರಹಗಳನ್ನು ಓದಲು ಓದುಗರಿಗೆ ಕಠಿಣವಾಗಬಹುದು ಎಂದು ಹಲವರ ಅಭಿಪ್ರಾಯ ಆದರೆ ಕ್ರಮೇಣ ಬದಲಾವಣೆಗಳ ಮೂಲಕ ಹೊಸ ಬರಹವನ್ನು ಓದಿ ಅಭ್ಯಾಸವಾದವರಿಗೆ ಹಳೆ ಬರಹದ ಪುಸ್ತಕಗಳನ್ನು ಓದಲು ಹೆಚ್ಚು ತೊಡಕು ಉಂಟಾಗುವುದಿಲ್ಲ. ಕಾರಣ ಕನ್ನಡ ಬರಹವನ್ನು ತಿಳಿದಿರುವವರು ತೆಲುಗು ಬರಹಗಳನ್ನು ಸುಲಭವಾಗಿ ಕಲಿಯಬಹುದು.

ಹಾಗೆಯೇ ಹೊಸ ಮತ್ತು ಹಳೆಯ ಬರಹಗಳ ನಡುವಿನ ಅಂತರವನ್ನು ಕಡಿಮೆ ಮಾಡಬಹುದು ಎಂದು ಶಂಕರಭಟರು ಹೇಳುತ್ತಾರೆ. ನಾವು ಬಿಡಬೇಕೆಂದು ಅಂದು ಕೊಂಡಿರುವ ಅಕ್ಷರಗಳನ್ನು ನಾವು ಕಡಿಮೆ ಬಳಸುತ್ತೇವೆ. ಅದರ ಬದಲಿಗೆ ಹೊಸ ರೂಪದ ಅಕ್ಷರಗಳನ್ನು ಬಳಸಬಹುದು. ಇದೇ ರೀತಿ ಹೊಸ ಬರಹವೂ ರೂಢಿಯಾದರೆ ಇದು ತಪ್ಪು ಎಂದು ಗೋಚರಿಸಲಾಗದು

ಕನ್ನಡದ ಬರಹಕ್ಕೆ ಹತ್ತು ಸ್ವರಗಳು ಮತ್ತು ಇಪ್ಪತ್ತೊಂದು ವ್ಯಂಜನಗಳು ಮಾತ್ರ ಬೇಕಾಗುತ್ತವೆ ಆದರೆ ಕೆಲವು ಬರಹಗಳಲ್ಲಿ ಉಳಿದ ಅಕ್ಷರವೂ ಕೆಲವೊಮ್ಮೆ ಬೇಕಾಗುವ ಸನ್ನಿವೇಶ ಬಂದಾಗ ನಾವು ಕೆಲವು ಅಕ್ಷರಗಳನ್ನು ಬಳಸಬೇಕಾಗುತ್ತದೆ. ಹಾಗಾಗಿ ಹೊಸ ಬರಿಗೆಯ ವರ್ಣಮಾಲೆಯಲ್ಲಿ ೩೨ ಅಕ್ಷರಗಳು ಮಾತ್ರ ಇರುತ್ತವೆ. ಆದರೂ ವಿಶಿಷ್ಟ ಅಂದರೆ ಸಂಸ್ಕೃತ ಹಾಗೂ ಮರಾಠಿ ಪಂಜಾಬಿ ಭಾಷೆಯ ಪದಗಳನ್ನು ಬಳಸುವಾಗ ಉಳಿದ ಅಕ್ಷರಗಳ ಬಳಕೆಯೂ ಅನಿವಾರ್ಯವಾಗುತ್ತದೆ. ಆದ್ದರಿಂದ ಯಾವ ತೊಂದರೆಯೂ ಇಲ್ಲ **ಋ** ಕಾರ, **ಶ** ಕಾರ, ಮೊದಲಾದವುಗಳು ಹೆಚ್ಚಿನ ಅಕ್ಷರಗಳು ಪಟ್ಟಿಯಲ್ಲಿ ಸೇರುತ್ತವೆಯೋ ಹೊರತು ಹೊಸ ಬರಹದ ವರ್ಣಮಾಲೆಯಲ್ಲಿ ಬರುವುದಿಲ್ಲವೆಂದೂ ಇದುವೇ ಹೊಸ ಬರಹಕ್ಕೂ ಈಗ ಬಳಕೆಯಲ್ಲಿರುವ ಬರಹಕ್ಕೂ ಇರುವ ವ್ಯತ್ಯಾಸವಾಗಿದೆ.

ಬರಹಕ್ಕೆ ಉಪಕರಣಗಳು ಬೇಕು ಮಾತಿಗೆ ಬೇಡ ಕನ್ನಡ ಭಾಷೆಯೂ ಊರಿನಿಂದ ಊರಿಗೆ ಜಾತಿಯಿಂದ ಜಾತಿಗೆ ಆಡುನುಡಿ ಬದಲಾಗಿರುತ್ತದೆ. ಆದರೆ ಸಮಾನವಾಗಿರುವ ಬರಹ ಕನ್ನಡವಿದೆ. ಎಲ್ಲಾ ಪತ್ರಿಕೆಗಳ ಕನ್ನಡ ಬರಹವೂ ಒಂದೇ ಆಗಿದ್ದು ಎಲ್ಲರೂ ಓದುವ ಕ್ರಮವೂ ಒಂದೇ ಆಗಿರುವುದನ್ನು ಗಮನಿಸಬಹುದು. ಬಂಗಾಲಿಯಲ್ಲಿ **'ವ'** ಧ್ವನಿಯಿಲ್ಲ ಬದಲಾಗಿ **'ಬ'** ಧ್ವನಿಯನ್ನು ಬಳಸುವಂತೆ ಕನ್ನಡದಲ್ಲಿ **'ಹ'** ಧ್ವನಿಗೆ **'ಅ'** ವನ್ನು ಬಳಸಬಹುದು

**ತೆಂಕು** ಕರ್ನಾಟಕದ ಹಲವು ಆಡುನುಡಿಗಳಲ್ಲಿ **ಹ ಕಾರ** ಇಲ್ಲವಾಗಿದೆ ಆದರೆ ಅಲ್ಲಿಂದ ಹೊರಬರುವ ಬರಹಗಳಲ್ಲಿ **ಹ ಕಾರ** ಉಳಿಸಲಾಗುತ್ತದೆ. ಕನ್ನಡದ್ದೇ ಪದಗಳ ಬರಿಗೆಗೂ ಓದಿಗೂ ಯಾವ ಭಿನ್ನತೆಯೂ ಇಲ್ಲ ಆದರೆ ಸಂಸ್ಕೃತದಿಂದ ಎರವಲಾಗಿ

ಪಡೆದ ಪದಗಳ ವಿಷಯದಲ್ಲಿ ಮಾತ್ರ ಬರಿಗೆಗೂ ಹಾಗೂ ಓದಿಗೂ ವ್ಯತ್ಯಾಸಗಳಿವೆ ಈ ವ್ಯತ್ಯಾಸವನ್ನು ತೆಗೆದಾಗ ಮಾತ್ರ ಕನ್ನಡ ಬರಹವನ್ನು ಕಲಿಯುವ ಮತ್ತು ಬಳಸುವ ಕಾರ್ಯ ಸುಲಭವಾಗುತ್ತದೆ.

ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳನ್ನು ಸಂಸ್ಕೃತದಲ್ಲಿ ಇರುವ ಹಾಗೆಯೇ ಬರೆಯುವುದರಿಂದ ಬರಹಕ್ಕೂ ಆಡುಮಾತಿಗೂ ತುಂಬಾ ವ್ಯತ್ಯಾಸಗಳಿವೆ. ಆದ್ದರಿಂದ ನಮ್ಮದೇ ಆದ ಹೊಸ ಪದಗಳನ್ನು ಬಳಸಿ ಕನ್ನಡ ಬರಹಕ್ಕೆ ಹೊಸ ವೈಜ್ಞಾನಿಕ ಆಲೋಚನೆಗಳನ್ನು ಬಳಸಿ ಕನ್ನಡ ಭಾಷೆಗೆ ಜೀವಂತಿಕೆಯನ್ನು ನೀಡಲು ಎಲ್ಲರೂ ಶ್ರಮಿಸಬೇಕಾಗಿದೆ. ನಿಧಾನವಾದ ಇಂತಹ ಬದಲಾವಣೆಗಳನ್ನು ಸ್ವೀಕರಿಸಿ ಕನ್ನಡ ಬರಿಗೆಯನ್ನು ಸುಲಭಗೊಳಿಸಬೇಕಾಗಿದೆ.

ಕನ್ನಡ ಭಾಷೆಯ ಪದಗಳು ಮತ್ತು ಪದ ರೂಪಗಳನ್ನು ಬಳಸುವಾಗ ನಾವು ಯಾವ ನಿಯಮಗಳನ್ನು ಬಳಸಬೇಕು ಬಳಸಬಾರದು ಎಂಬ ವಿಷಯವನ್ನು ಯಾರೂ ಹೇಳಬಹುದು ಆದರೆ ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳನ್ನು ಕನ್ನಡದಲ್ಲಿ ಬಳಸುವಾಗ ಸಂಸ್ಕೃತದ ಕಟ್ಟಲೆಗಳನ್ನು ಬಳಸಬೇಕೆಂದು ಹೇಳುತ್ತಾರೆ ಕನ್ನಡದ ಪಂಡಿತರಲ್ಲಿ ಹಳೆ ಕಾಲದಿಂದ ಕನ್ನಡ ಭಾಷೆಯ ಮೇಲಿನ ಕೀಳರಿಮೆ ಹಾಗೂ ಸಂಸ್ಕೃತದ ವ್ಯಾಮೋಹವೇ ಕನ್ನಡ ಭಾಷೆಯ ಮೇಲೆ ಹೆಚ್ಚು ಪರಿಣಾಮ ಬೀರಿದೆ.

**ಕನ್ನಡ ಭಾಷೆ ಮತ್ತು ವ್ಯಾಕರಣಗಳ ಇತಿಹಾಸದ ಮರು ನಿರ್ಮಾಣ ಶಂಕರಭಟ್ಟರ ತೀವ್ರ ಆಸಕ್ತಿಗಳಲ್ಲಿ ಒಂದು** ದ್ರಾವಿಡ ಭಾಷೆಯ ವರ್ಗಕ್ಕೆ ಸಹಜವಾದ ಚರಿತ್ರೆಯನ್ನು ಕಟ್ಟಿಕೊಡುವ ವೈಜ್ಞಾನಿಕ ಪ್ರಯತ್ನವನ್ನು ಮಾಡಿದ್ದಾರೆ. ಆರ್ಯ ಮೂಲದ ಸಂಸ್ಕೃತ ಇನ್ನೊಂದೆಡೆ ಪಾಶ್ಚಾತ್ಯ ಮೂಲದ ಇಂಗ್ಲೀಷ್ ಕನ್ನಡ ಭಾಷೆಯ ಸ್ವರೂಪ ಹಾಗೂ ಚರಿತ್ರೆಗಳಲ್ಲಿ ಅನ್ವೇಷಣೆಯನ್ನು ನಿರಂತರವಾಗಿ ಮಾಡುತ್ತಾ ಬಂದಿದ್ದಾರೆ. ಭಾಷೆ ಕಲಿಕೆ ಬಳಕೆಯಲ್ಲಿ ಹಲವಾರು ಕಟ್ಟಳೆಗಳಿವೆ ಎಲ್ಲರ ಅಭಿಪ್ರಾಯವೂ ಒಂದೇ ತೆರನಾಗಿರುವುದಿಲ್ಲ.

ನುಡಿಯರಿಗರು ತಾವು ನಂಬಿರುವ ಸಿದ್ಧಾಂತಗಳ ಮನೋ ಧರ್ಮದ ಮೇಲೆ ಅದು ಅವಲಂಬಿಸಿರುತ್ತದೆ ಕನ್ನಡ ಭಾಷೆಗೆ ವ್ಯಾಕರಣದ ಅಸಾಧ್ಯತೆಗಳು

ಖಂಡಿತ ಇದೆ ಕನ್ನಡ ಭಾಷೆಯ ನಿರೂಪಣೆಯ ಸ್ವರೂಪ, ವ್ಯಾಪ್ತಿ, ನಿಯೋಗಗಳಲ್ಲಿ ಭೇದವನ್ನು ಕಾಣಬಹುದು ನಾವು ಕಲಿಯುತ್ತಿರುವ ವ್ಯಾಕರಣ ವ್ಯಾಕರಣ ಅಲ್ಲ ಎಂಬ ಸಂಗತಿಯನ್ನು ಅವರು ಖಡಾಖಂಡಿತವಾಗಿ ಹೇಳುತ್ತಾರೆ ಇದು ನಮ್ಮೆಲ್ಲರಿಗೆ ಚಿಂತನೆ. ಕನ್ನಡವೂ ಬೇರೆ ದ್ರಾವಿಡ ಭಾಷೆ ಭಾಷೆಗಳ ತರಹ, ಒಂದು ಭಾಷೆ, ಅನ್ಯಭಾಷೀಯ ಮಾದರಿಯನ್ನು ನಾವು ನಿರಾಕರಿಸಬೇಕು ಗ್ರಹಿಸಿ ರೂಪಿಸಬೇಕು ಎಂಬುದು ಅವರ ನಿಲುವಾಗಿದೆ.

**ಕನ್ನಡದಲ್ಲಿ ಸಂಶೋಧನೆ ಮತ್ತು ಗಣಕಯಂತ್ರ ತಂತ್ರಜ್ಞಾನಕ್ಕೆ ಅಳವಡಿಸಲು ವ್ಯಾಕರಣದ ಮರುರೂಪಣ ಅಗತ್ಯತೆಯಿದೆ ಎಂದು ಡಿ.ಎನ್. ಶಂಕರಭಟ್ಟರ ಅಭಿಪ್ರಾಯವಾಗಿದೆ** ಹಾಗೂ ಕಲಿಯವವರ ಮಟ್ಟಿಗೆ ಕಲಿಸುಗರೆಂದರೆ ಎಲ್ಲವನ್ನೂ ತಿಳಿದವರು ಕಲಿಯುವವರಲ್ಲಿ ಏಳುವ ಸಂದೇಹಗಳನ್ನೆಲ್ಲ ಇಲ್ಲವಾಗಿಸುವ ಅಳವು ಅವರಿಗಿದೆ ಹಾಗಾಗಿ ಅವರು ಏನು ಹೇಳುತ್ತಿದ್ದಾರೆ ಎಂಬುದನ್ನು ಕಿವಿಗೊಟ್ಟು, ಕೇಳಿ ಅದನ್ನು ಸರಿಯಾಗಿ ತಿಳಿದುಕೊಳ್ಳುವುದೇ ಕಲಿಗರು ಮಾಡಬೇಕಾಗಿರುವ ಮುಖ್ಯ ಕೆಲಸವೆಂದು ಹೇಳುತ್ತಾರೆ.

ಕನ್ನಡ ಭಾಷೆಗೆ ತನ್ನದೇ ಆದ ಹೊಸದೊಂದು ವ್ಯಾಕರಣ ಪರಂಪರೆಯನ್ನು ಸಿದ್ಧಪಡಿಸುವುದು ಅವಶ್ಯಕವೆಂದು ಹೇಳಿದರು. ಬಳಕೆಯಲ್ಲಿರುವ ಕನ್ನಡ ವ್ಯಾಕರಣದ ಪಠ್ಯಗಳು ಹಾಗೂ ಅದಕ್ಕೆ ಆಕರಗಳಾಗಿರುವ ವ್ಯಾಕರಣ ಗ್ರಂಥಗಳು ಕನ್ನಡ ವ್ಯಾಕರಣವನ್ನು ನೇರವಾಗಿ ವಿವರಿಸುವ ಬದಲು ಸಂಸ್ಕೃತ ವ್ಯಾಕರಣದ ನಿಯಮಗಳನ್ನು ಕನ್ನಡ ಭಾಷೆಗೆ ಅಳವಡಿಸಲು ಪ್ರಯತ್ನಿಸುತ್ತೇವೆ. ಆದುದರಿಂದ ಕನ್ನಡದ ವ್ಯಾಕರಣವನ್ನು ತಪ್ಪು ತಪ್ಪಾಗಿ ಕಲಿಸುತ್ತೇವೆ. ಆದ್ದರಿಂದ ಇದನ್ನು ಕಲಿಯುವುದು ಮತ್ತು ಕಲಿಸುವುದು ಕಷ್ಟವಾದ ಕಾರ್ಯವಾಗಿದೆ.

ಸೊಲ್ಲಿಗರನ್ನು ಸೂಚಿಸಲು ಸಂಸ್ಕೃತದಲ್ಲಿ ಎರಡು ಪದಗಳನ್ನು ಬಳಸುತ್ತಾರೆ. ವಯ್ಯಾಕರಣಃ ಎಂಬುದು ಗಂಡಸರನ್ನು ಸೂಚಿಸುತ್ತದೆ. ವಯ್ಯಾಕರಣೀ ಎಂಬುದು ಹೆಂಗಸರನ್ನು ಸೂಚಿಸುತ್ತದೆ. ಆದರೆ ಕನ್ನಡದಲ್ಲಿ.

ಗಂಡಸರನ್ನು ಸೂಚಿಸುವುದಕ್ಕೆ ವಯ್ಯಾಕರಣಿ ಎಂಬ ಪದವೇ ಬಳಕೆಗೆ ಬಂದಿದೆ. ಆದರೆ ಇದು ತಪ್ಪು ಗಂಡಸರನ್ನು ಸೂಚಿಸಲು **ವಯ್ಯಾಕರಣ** ಎಂಬುದನ್ನೇ ಎಂಬುದನ್ನೇ ಬಳಸಬೇಕು ಎಂಬುದಾಗಿ ಕೆಲವರು ಕನ್ನಡದ ವಿದ್ವಾಂಸರು ವಾದಿಸುತ್ತಾರೆ. ಇದಕ್ಕೆ ವಿದ್ವಾಂಸರಿಗೆ ಸಂಸ್ಕೃತ ವ್ಯಾಕರಣದ ಕಟ್ಟಲೆಯೇ ಆಧಾರ. ಇದು ಸರಿಯಲ್ಲ ಕಾರಣ ಯಾವ ನುಡಿಯಿಂದಲೇ ಆಗಲಿ ಒಂದು ಪದವನ್ನು ಎರವಲಾಗಿ ಪಡೆದಾಗ ಅದನ್ನು ನಾವು ಯಾವ ರೀತಿಯಲ್ಲಿ ಯಾವ ರೂಪದಲ್ಲಿ ಬಳಸಬೇಕು ಎಂಬುದಕ್ಕೆ ಎರವಲಾಗಿ ಪಡೆದ ನುಡಿಯಲ್ಲಿರುವ ಬಳಕೆಯ ಕಟ್ಟಲೆಗಳೇ ಆಧಾರವಾಗಬೇಕಲ್ಲದೆ, ಎರವಲು ಕೊಟ್ಟ ನುಡಿಯ ಕಟ್ಟಲೆಗಳಲ್ಲ, ಎಂದು ಡಿ.ಎನ್. ಶಂಕರಭಟ್ಟರು ಅಭಿಪ್ರಾಯಿಸಿದ್ದಾರೆ.

ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳಲ್ಲಿ ವ್ಯಾವಹಾರಿಕ, ಸಾಮಾಜಿಕ, ಯಾಂತ್ರಿಕ, ಮೊದಲಾದ ಹಲವು ಪದಗಳನ್ನು ನಾವು ನಾಮಪದಗಳಿಂದ ಬೇರಾಗಿರುವ ಗುಣಪದಗಳಾಗಿ ಬಳಸುತ್ತೇವೆ. ಹಾಗಾಗಿ ವಯ್ಯಾಕರಣಿಯಂತಹ ಪದಗಳ ಮಟ್ಟಿಗೂ ನಾವು ಇದೇ ಕ್ರಮವನ್ನು ಅನುಸರಿಸುವುದು ಸರಿಯದ ದಾರಿ ಕನ್ನಡದಲ್ಲಿ ಅವು ಯಾವ ರೀತಿಯಲ್ಲಿ ಬಳಕೆಗೆ ಬಂದಿವೆ ಎಂಬುದು ನಮಗೆ ಮುಖ್ಯವಲ್ಲವೆಂದು ವೈಜ್ಞಾನಿಕ ಆಲೋಚನೆಗಳ ಮೂಲಕ ವಿವರಿಸಿದ್ದಾರೆ.

ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳಲ್ಲಿ ಬರುವ ಮಹಾಪ್ರಾಣ **ಷ ಋ** ಮೊದಲಾದ ಕೆಲವು ಅಕ್ಷರಗಳು ಓದಿನಲ್ಲಿ ಹಾಗೂ ಮಾತಿನಲ್ಲಿ ಕಾಣುವುದಿಲ್ಲ ಹಾಗಿದ್ದರೂ ಅವನ್ನು ಸಂಸ್ಕೃತದಲ್ಲಿರುವ ಹಾಗೆಯೇ ಬರೆಯಬೇಕು. ಇಲ್ಲವಾದರೆ ಅದು ತಪ್ಪಾಗುತ್ತದೆ ಎಂದು ಹೇಳುವುದೂ ಸಂಸ್ಕೃತದ ನಿಯಮಗಳನ್ನು ಕನ್ನಡದ ಮೇಲೆ ಹೊರಿಸುವುದು ತಪ್ಪುದಾರಿಯಾಗಿದೆ. ಹೆಚ್ಚಿನ ಕನ್ನಡಿಗರ ಓದಿನಲ್ಲಿ ಇಲ್ಲವೇ ಆಡುನುಡಿಯಲ್ಲಿ ಈ ಎರವಲು ಪದಗಳು ಹೇಗೆ ಕಾಣಿಸುತ್ತವೆಯೋ ಹಾಗೆ ಬರೆಯುವುದೇ ಕನ್ನಡದ ಮಟ್ಟಿಗೆ ಸರಿಯದ ದಾರಿ ಮಾತ್ರವಲ್ಲದೆ ಜಗತ್ತಿನಲ್ಲಿ ಎಲ್ಲ ಭಾಷೆಗಳಿಗೂ ಅನ್ವಯಿಸುವ ನಿಯಮವಾಗಿದೆ ಎಂದು ಹೇಳುತ್ತಾರೆ ಮಾನವರು ಮಾತನಾಡಲು ಹುಟ್ಟಿ ಬೆಳೆಯುವಾಗ ಕಲಿಯುತ್ತಾರೆ. **ಮಾತನಾಡಲು ಬೇಕಾದ ಎಲ್ಲಾ ವ್ಯಾಕರಣ ಮಾಹಿತಿಗಳು ನಮ್ಮ ತಲೆಯಲ್ಲಿ ಹುದುಗಿರುತ್ತವೆ ಎಂದು ಚಾಮ್ ಸ್ಕೀ ಹೇಳುತ್ತಾನೆ.**

ಆದರೆ ನಾವು ಮಾತನಾಡುವಾಗ ಪದ ಹಾಗೂ ವಾಕ್ಯಗಳನ್ನು ಎಲ್ಲಿ ಹೇಗೆ ಜ್ಞಾನವು ನಮ್ಮ ಮೆದುಳಿನಲ್ಲಿ ನಮಗೆ ತಿಳಿಯದ ಸ್ಥಿತಿಯಲ್ಲಿ ಇರುವುದೇ ಕಾರಣವೆಂದು ಹೇಳುತ್ತಾರೆ. ಮಾತಿನಲ್ಲಿ ಬಳಸುವ ಪದಗಳನ್ನು ವಾಕ್ಯಗಳಾಗಿ ಮಾಡುತ್ತೇವೆ. ಮಾನವ ಮಾತಿಗೂ ಪ್ರಾಣಿಗಳ ಶಬ್ದಕ್ಕೂ ವ್ಯತ್ಯಾಸವಿರುತ್ತದೆ. ಮಾನವನು ಆಡುವ ಭಾಷೆಯ ಪದಗಳಿಗೆ ಅರ್ಥಗಳಿರುತ್ತದೆ. ಆದರೆ ಅವುಗಳ ಭಾಗಗಳಾಗಿ ಬರುವ ಉಲಿಗಳಿಗೆ ನೇರವಾದ ಅರ್ಥಗಳಿರುವುದಿಲ್ಲ ಇಂತಹ ಉಲಿಯನ್ನು ಬಳಸಿ ನಾವು ಸಾವಿರಾರು ಅರ್ಥವಿರುವ ಪದಗಳನ್ನು ಸೃಷ್ಟಿಸಲು ಸಾಧ್ಯ. ಎತ್ತುಗೆಗಾಗಿ: ಕನ್ನಡ ಭಾಷಿಕ ಸಮುದಾಯದ ಮಾತಿನಲ್ಲಿ ೩೨ ಅಕ್ಷರಗಳು ಬಳಕೆಯಾಗುತ್ತದೆ ಇವುಗಳ ಅಕ್ಷರಗಳಿಗೂ ಯಾವುದೇ ಅರ್ಥವಿಲ್ಲ. ಆದರೆ ಈ ಅಕ್ಷರಗಳ ಮೂಲಕ ಸೇರಿ ತಯಾರಾದ ಪದಗಳಿಗೆ ಅರ್ಥವಿರುತ್ತದೆ.

**ಉದಾ :ನಗು, ನ್+ಅ+ಗ್+ಉ** ಎಂಬ ಪದವನ್ನು **ನ ಕಾರ, ಗ ಕಾರ, ಅ ಕಾರ**ಮತ್ತು **ಉ ಕಾರಗಳೆಂಬ ೪** ಸ್ವರ ಮತ್ತು ವ್ಯಂಜನಗಳ ಮೂಲಕ ಕಟ್ಟಲಾಗಿದೆ. (ಸ್ವರ ಮತ್ತು ವ್ಯಜನಗಳು ಸೇರಿ **'ಅಕ್ಷರ'**ವಾಗುತ್ತದೆ) ಇವುಗಳಲ್ಲಿ ಯಾವ ಅಕ್ಷರಗಳಿಗೂ ತನ್ನದೇ ಆದ ಅರ್ಥವಿಲ್ಲ ಅದರೆ ಈ ನಾಲ್ಕು ಉಲಿಗಳ ಜೋಡಣೆಯಿಂದ ಮಾತ್ರ ಸ್ಮಿತ ಎಂಬ ಅರ್ಥ ಬರುತ್ತದೆ ಈ ರೀತಿ ಅಕ್ಷರಗಳು ನೇರವಾಗಿ ಯಾವುದೇ ಅರ್ಥವನ್ನು ಕೊಡದಿರುವಾಗ ಅವುಗಳ ಜೋಡಣೆಯಿಂದ ಮಾತ್ರ ಅರ್ಥವನ್ನು ಕೊಡುವುದರಿಂದ ೩೨ ಉಲಿಗಳನ್ನು ಬಳಸಿ ಸಾವಿರಾರು ಪದಗಳನ್ನು ಸೃಷ್ಟಿಸಬಹುದು.

ಮಾತಿನಲ್ಲಿ ಉಪಯೋಗಿಸುವ ಧ್ವನಿಗಳ ಸಂಖ್ಯೆ ಹಾಗೂ ಸ್ವರೂಪಗಳು ಭಾಷೆಯಿಂದ ಭಾಷೆಗೆ ಭಿನ್ನವಾಗಿರುತ್ತದೆ. ಅವು ನಾವು ಬಳಸುವ ಪದಗಳ ಸಂಖ್ಯೆಯ ಮೇಲೆ ಯಾವುದೇ ಪರಿಣಾಮವನ್ನೂ ಉಂಟು ಮಾಡುವುದಿಲ್ಲ. ಬ್ರೆಸಿಲ್‌ನ ಪಿರಹ ಎಂಬ ನುಡಿಯಲ್ಲಿ ಮೂರು ಸ್ವರಗಳು ಮತ್ತು ಏಳು ವ್ಯಂಜನಗಳೂ ಮಾತ್ರ ಉಪಯೋಗಿಸುತ್ತಿದ್ದು ಇತರ ಭಾಷೆಯ ಹಾಗೆಯೇ ಸಾವಿರಾರು ಅರ್ಥವಿರುವ ಪದಗಳನ್ನು ಉಂಟು ಮಾಡಲು ಸಾಧ್ಯವಿದೆ.

ಒಂದೇ ನುಡಿಯಲ್ಲಿಯೂ ಕಾಲದಿಂದ ಕಾಲಕ್ಕೆ ಸಮಾಜದಿಂದ ಸಮಾಜಕ್ಕೆ ಬೇರೆ ಬೇರೆ ಸಂಖ್ಯೆಯ ಧ್ವನಿಗಳು ಬಳಕೆಯಲ್ಲಿದೆ. ಹಳಗನ್ನಡದ ಕೆಲವು ಅಕ್ಷರಗಳು

ಹೊಸಗನ್ನಡದಲ್ಲಿ ಸಿಗುವುದಿಲ್ಲ. ಹೊಸಗನ್ನಡದ ಕೆಲವು ಅಕ್ಷರಗಳು ಗಡಿಯಿಂದ ಗಡಿಗೆ ಅಂದರೆ ಶ ಕಾರವೂ ಹೊಸಗನ್ನಡದಲ್ಲಿದೆ. ಆದರೆ ಮೈಸೂರು ಕನ್ನಡದಲ್ಲಿ ಇಲ್ಲದ ಕೆಲವು ಸ್ವರಗಳು ಧಾರವಾಡ ಕನ್ನಡದಲ್ಲಿ ನಾವು ಕಾಣಬಹುದು. ಉಲಿಗಳ ಸಂಖ್ಯೆ ಹೆಚ್ಚಾಗಿರಲಿ ಕಡಿಮೆಯಿರಲಿ ಯಾವುದೇ ನೇರವಾದ ಅರ್ಥಗಳನ್ನು ಕೊಡದಿದ್ದರೂ ತನ್ನ ವಿಶಿಷ್ಟ ಗುಣದಿಂದಾಗಿ ಪ್ರಪಂಚದ ಎಲ್ಲಾ ನುಡಿಗಳನ್ನು ಭಾಷಿಕರು ತಮ್ಮ ಮನಸ್ಸಿನಲ್ಲಿ ಉಂಟಾಗುವ ಅಭಿಪ್ರಾಯ ಹಾಗೂ ಜ್ಞಾನವನ್ನು ಇತರರಿಗೆ ತಿಳಿಸಬಲ್ಲಂತಹ ಶಕ್ತಿಯನ್ನು ಹೊಂದಿರುತ್ತಾರೆ.

ಮಾನವನಲ್ಲಿ ಒಳಮಾತು ಮತ್ತು ಹೊರಮಾತು ಎಂಬ ಎರಡು ವಿಧದ ಮಾತುಗಳು ಬಳಕೆಯಾಗುತ್ತವೆ. ಇದು ಮಾನವನಿಗೂ ಇತರ ಪ್ರಾಣಿಗಳಿಗೂ ನಡುವಿನ ಒಂದು ದೊಡ್ಡ ವ್ಯತ್ಯಾಸ ಮಾನವನು ತನ್ನ ಅನಿಸಿಕೆಗಳನ್ನು ಬಯಕೆಗಳನ್ನು ತಿಳುವಳಿಕೆಯನ್ನು ಬೇರೆಯವರ ಜೊತೆಗೆ ವ್ಯವಹರಿಸುವಾಗ ಅಥವಾ ವಿಚಾರ ವಿನಿಮಯ ಮಾಡಿಕೊಳ್ಳುವಾಗ ಹೊರ ಮಾತನ್ನು ಬಳಸುತ್ತಾನೆ.

ಆದರೆ ಸಾಧಾರಣವಾಗಿ ನಮ್ಮ ಒಳ ಮನಸ್ಸಿನ ಆಸೆಗಳನ್ನು ಜ್ಞಾನವನ್ನು ನಮ್ಮ ಮೆದುಳಿನಲ್ಲಿ ಅರಿವಿಗೆ ಬಾರದ ರೂಪದಲ್ಲಿ ಇಟ್ಟಿರುತ್ತಾನೆ. ನಮಗೆ ಅದು ಗೋಚರವಾಗದಿದ್ದರೂ ಇದು ಕ್ರಿಯಾಶೀಲವಾಗಿಯೇ ಇರುತ್ತದೆ. ಇಂತಹ ಸನ್ನಿವೇಶದಲ್ಲಿ ಮನುಷ್ಯರು ತಮ್ಮೊಳಗೆ ಒಳಮಾತನ್ನು ಬಳಸಿಕೊಳ್ಳುತ್ತಾರೆ. ಇದಕ್ಕೆ ಯಾವುದೇ ರೀತಿಯ ಕಲಿಕೆಯ ಅವಶ್ಯಕತೆಯೂ ಇಲ್ಲ ಇದು ರೂಢಿಗತವಾಗಿ ಮಾನವನಲ್ಲಿ ಬಂದಿರುತ್ತದೆ. ಹಲವು ಕಾರ್ಯಗಳನ್ನು ನಮ್ಮ ಬುದ್ಧಿಶಕ್ತಿಯ ಮೂಲಕ ನಮ್ಮ ನೆನಪಿಗೆ ಬರುವಂತೆ ಮಾಡುವ ಮೂಲಕ ಹೊಸ ಹೊಸ ವೈಜ್ಞಾನಿಕ ವಿಧಾನಗಳನ್ನು ಆಲೋಚನೆಗಳನ್ನು ನಾವು ಕಂಡುಹಿಡಿಯಲು ಸಾಮರ್ಥ್ಯವನ್ನು ಪಡೆದಿರುತ್ತೇವೆ.

ನಮ್ಮ ಮಾತಿನ ಬಳಕೆಯಲ್ಲೂ ಈ ಗುಣದಿಂದಾಗಿ ಹಲವಾರು ರೀತಿಯ ಬದಲಾವಣೆಗಳನ್ನು ನಾವು ನಮ್ಮ ಬದುಕಿನಲ್ಲಿ ಮಾಡಿಕೊಂಡಿರುತ್ತೇವೆ. ಈ ಸ್ವಭಾವ ಇಲ್ಲದಿದ್ದರೆ ನಾವು ನಮ್ಮ ಮಾತನ್ನು ಬರಹ ರೂಪಕ್ಕೆ ಇಳಿಸಲು ಸಾಧ್ಯವಾಗುತ್ತಿರಲಿಲ್ಲ. ನಮ್ಮ ನುಡಿಯಲ್ಲಿ ವಿವಿಧ ರೀತಿಯ ಶಾಸ್ತ್ರ ಹಾಗೂ ವಿಜ್ಞಾನದ ಆವಿಷ್ಕಾರಕ್ಕೆ ಈ ಗುಣಗಳೇ ಕಾರಣವಾಗಿದೆ.

**'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ'** ಕನ್ನಡ ಬರಹ ವ್ಯಾಕರಣಕ್ಕೆ ಒಂದು ಸಾವಿರ ವರ್ಷಗಳಿಗಿಂತಲೂ ಹೆಚ್ಚು ಇತಿಹಾಸವಿದೆ ಇವುಗಳು ಇಂಗ್ಲೀಷ್, ಸಂಸ್ಕೃತ, ಮರಾಠಿ, ಹಿಂದಿ, ರಷ್ಯನ್ ಇತ್ಯಾದಿ ಭಾಷೆಗಳೂ ತನ್ನದೇ ಆದ ವ್ಯಾಕರಣವನ್ನು ಹೊಂದಿದೆ. ಆದರೆ ಕನ್ನಡ ವ್ಯಾಕರಣದ ಮೇಲೆ ಹೆಚ್ಚು ಸಂಶೋಧನೆಗಳು ಮತ್ತು ಆವಿಷ್ಕಾರಗಳು ನಡೆದಿದ್ದರೂ ಕನ್ನಡ ಭಾಷೆಯಲ್ಲಿ ನಾವು ಬಳಸುತ್ತಿರುವ ವ್ಯಾಕರಣ ಕನ್ನಡ ನುಡಿಯದ್ದು ಅಲ್ಲ ಎಂದು ಡಿ.ಎನ್. ಶಂಕರಭಟ್ಟರ ವಾದವಾಗಿದೆ.

ಹಿಂದಿನಿಂದಲೂ ಕನ್ನಡ ಭಾಷೆಗೆ ಸಂಸ್ಕೃತ ಭಾಷೆಯ ಪ್ರಭಾವವೂ ಅಧಿಕವಾಗಿದೆ ಸಂಸ್ಕೃತದ ವ್ಯಾಕರಣ ಪರಂಪರೆಯಲ್ಲಿ ತಯಾರಾದ ಕೇಶಿರಾಜನ ಶಬ್ಧಮಣಿ ದರ್ಪಣ, ಭಟ್ಟಾಕಳಂಕನ ಶಬ್ದಾನುಶಾಸನ ಹಾಗೂ ಉಳಿದ ಹಳಗನ್ನಡದ ವ್ಯಾಕರಣಗಳೆಲ್ಲವೂ ಸಂಸ್ಕೃತ ಭಾಷೆಯ ವ್ಯಾಕರಣಗುಂಪಿಗೆ ಸೇರಿದೆ. ಈ ವ್ಯಾಕರಣವನ್ನೇ ಅನುಸರಿಸುತ್ತಾ ಬಂದ ನಮ್ಮ ವಿದ್ವಾಂಸರು ಸಂಸ್ಕೃತ ವ್ಯಾಕರಣ ನಿಯಮಗಳನ್ನು ಕನ್ನಡ ಭಾಷೆಗೆ ಅಳವಡಿಸುತ್ತಾ ಅಂದಿನಿಂದ ಇಂದಿನವರೆಗೆ ಅದನ್ನು ಕಲಿಕೆಯ ರೂಪದಲ್ಲಿ ಕನ್ನಡ ಭಾಷಿಕರಿಗೆ ಹೇಳಿಕೊಟ್ಟಿದ್ದಾರೆ ಈ ಕಲ್ಪನೆಯೂ ತಪ್ಪು ಪ್ರತಿಯೊಂದು ಭಾಷೆಯೂ ತನ್ನದೇ ಆದ ಪದ, ವಾಕ್ಯ, ಪದಕಂತೆಗಳನ್ನು ಒಳಗೊಂಡಿದ್ದು ಬೇರೆ ಭಾಷೆಯ ವ್ಯಾಕರಣವನ್ನು ಬಲವಂತವಾಗಿ ಬಳಸಿದ್ದಾಗ ಹಲವಾರು ತೊಡಗುಗಳು ಉಂಟಾಗುತ್ತದೆ.

ಹಾಗೆಯೇ ಹತ್ತೊಂಬತ್ತನೇ ಶತಮಾನದಿಂದ ನಂತರ ಬ್ರಿಟಿಷರು ಅಂದರೆ ಕ್ರಿಶ್ಚಿಯನ್ ಮಿಷನರಿಗಳು ಇಂಗ್ಲಿಷ್‌ನಲ್ಲಿ ಬರೆದಿರುವ ಹೊಸಗನ್ನಡ ವ್ಯಾಕರಣಗಳು ಹಾಗೂ ನಂತರ ಆಧುನಿಕ ಭಾಷಾ ವಿಜ್ಞಾನಿಗಳು ರಚಿಸಿರುವ ಕನ್ನಡದ ವ್ಯಾಕರಣ ಗ್ರಂಥಗಳೂ ಹಾಗೂ ಬರಹಗಳು ಅಂದರೆ ಸಂಸ್ಕೃತ ವ್ಯಾಕರಣ, ಯುರೋಪಿನ ವ್ಯಾಕರಣ, ಇಂಗ್ಲೀಷ್ ವ್ಯಾಕರಣ, ಈ ಮೂರು ಪರಂಪರೆಯ ವ್ಯಾಕರಣಗಳನ್ನು ನಮ್ಮ ಕನ್ನಡ ಭಾಷೆಯೂ ಅನುಸರಿಸಲೂ ಯತ್ನಿಸಿವೆಯಲ್ಲದೆ ಕನ್ನಡದ್ದೇ ಆದ ಒಂದು ವ್ಯಾಕರಣ ಪ್ರಯತ್ನಿಸಿಲ್ಲ ಸಂಸ್ಕೃತ, ಲ್ಯಾಟಿನ್, ಇಂಗ್ಲೀಷ್ ಇವುಗಳು ಇಂಡೋ–ಯುರೋಪಿಯನ್ ಭಾಷಾವರ್ಗಕ್ಕೆ ಸೇರಿದೆ. ಈ ಮೂರು ಭಾಷೆಗಳು ಸ್ವತಂತ್ರ ಭಾಷೆಗಳಾಗಿದ್ದು ಈ ಮೂರು ವ್ಯಾಕರಣದ ಮೂಲ ತತ್ವಗಳು ಹೆಚ್ಚು ಕಡಿಮೆ ಒಂದೇ ರೀತಿಯಾಗಿರುತ್ತದೆ.

ಆದರೆ ಕನ್ನಡ ಭಾಷೆಯೂ ದ್ರಾವಿಡ ಭಾಷಾ ಕುಟುಂಬಕ್ಕೆ ಸೇರಿದ್ದು ಸಂಸ್ಕೃತ, ಲ್ಯಾಟಿನ್, ಇಂಗ್ಲೀಷ್ ಈ ಮೂರು ಭಾಷೆಗಳ ವ್ಯಾಕರಣ ನಿಯಮಗಳಿಂದ ತೀರ ಬೇರೆಯಾಗಿದೆ ಇಂತಹ ಭಿನ್ನತೆಯನ್ನು ಕನ್ನಡ ವ್ಯಾಕರಣದಲ್ಲಿ ತೊಲಗಿಸಿ ಕನ್ನಡದ್ದೇ ಆದ ನಮ್ಮ ವ್ಯಾಕರಣ ಪರಂಪರೆಯೊಂದನ್ನು ಬೆಳಸಿಕೊಳ್ಳುವುದು ಅಗತ್ಯವಿದೆ.

ಕನ್ನಡದ ಹೆಚ್ಚಿನ ವ್ಯಾಕರಣದಲ್ಲಿ ಅನಿವಾರ್ಯವಾಗಿ ಸಂಸ್ಕೃತ ವ್ಯಾಕರಣದ ಮೂಲ ತತ್ವಗಳನ್ನು ಯಾವುದೇ ಬದಲಾವಣೆ ಇಲ್ಲದೆ ಹಾಗೆಯೇ ಅಳವಡಿಸಿಕೊಳ್ಳಲು ಪ್ರಯತ್ನಿಸಿರುವುದು ಶೋಚನೀಯ ಸ್ಥಿತಿಯಾಗಿದೆ. ಇಂತಹ ರೂಢಿಯೂ ಪ್ರಾಚೀನ ಕಾಲದ ವ್ಯಾಕರಣ ಗ್ರಂಥಗಳಿಂದಲೂ ನಡೆಯುತ್ತಾ ಬಂದಿದೆ. ಇದನ್ನು ನಾವು ಬದಲಾಯಿಸಿ ಕನ್ನಡ ಭಾಷೆಗೆ ಹೊಸದಾದ ವ್ಯಾಕರಣ ಕಟ್ಟುವುದು ಅಗತ್ಯವಾಗಿದೆ.

ಕನ್ನಡ ವ್ಯಾಕರಣವನ್ನು ತಿಳಿಸಲು ರಚನೆಯಾಗಿರುವ ಒತ್ತುಗೆಗಳು ಕನ್ನಡ ವ್ಯಾಕರಣದ ಲಕ್ಷಣಗಳು ಅಂದರೆ ಪದಗಳನ್ನು ವಾಕ್ಯಗಳನ್ನು, ಪದಗಳ ಗುಂಪನ್ನು ಹೇಗೆ ರಚಿಸುತ್ತೇವೆ, ಹಾಗೆ ಬಳಸಬೇಕು., ಯಾವ ಅರ್ಥವನ್ನು ಕೊಡಬೇಕು, ಎಂದು ನೇರವಾಗಿ ಹೇಳುವ ಬದಲು ಕೇಶಿರಾಜನ ಕಾಲದಿಂದಲೂ ಕನ್ನಡ ವ್ಯಾಕರಣ ಕುರಿತು ಸಂಸ್ಕೃತ ಪಂಡಿತರು ಬಳಸಿರುವ ನಿಯಮಗಳನ್ನು ಮಾತ್ರ ಹೇಳಲು ಪ್ರಯತ್ನಿಸುತ್ತೇವೆ.

ಸಂಸ್ಕೃತ ವ್ಯಾಕರಣದಲ್ಲಿ ಬರುವ ಮೂಲತತ್ವಗಳು, ನಿಯಮಗಳು, ಸಂಸ್ಕೃತ ವ್ಯಾಕರಣಕ್ಕೆ ಮಾತ್ರ ಅನ್ವಯಿಸುತ್ತದೆಯೇ ಹೊರತು ಕನ್ನಡ ವ್ಯಾಕರಣಕ್ಕೆ ಅಲ್ಲ ಇನ್ನೂ ಕೆಲವು ವಿಷಯಗಳು ಹಳಗನ್ನಡಕ್ಕೆ ಸಂಬಂಧಿಸಿರುತ್ತದೆ. ಆದರೆ ಇಲ್ಲಿ ಬರುವ ಎಲ್ಲಾ ವ್ಯಾಕರಣಾಂಶಗಳನ್ನು ನಾವು ಗಮನಿಸಿದಾಗ ಹೊಸಗನ್ನಡದ ಕಡೆಯಿಂದ ನೋಡಿದಾಗ ಬಹಳ ತೊಂದರೆಗಳು ಉಂಟಾಗುವುದನ್ನು ನಾವು ಕಾಣಬಹುದು.

ಸಂಸ್ಕೃತದಲ್ಲಿ ಬಳಕೆಯಾಗುವ ಜೋಡಣೆಯ ಕಟ್ಟಳೆಗಳನ್ನು ಕನ್ನಡ ಭಾಷಿಕ ಸಮುದಾಯದ ಮಕ್ಕಳಿಗೆ ಅರ್ಥವಾಗುವ ಹಾಗೆ ವಿವರಿಸುವ ಮೊದಲು ಸಂಸ್ಕೃತದಿಂದ ಹೊಸಗನ್ನಡಕ್ಕೆ ಪದ ಎರವಲು ಪದಗಳ ಪರಿಚಯವಿರಬೇಕು. ನಂತರ ಆ ಪದಗಳು ಕನ್ನಡ ಭಾಷೆಯಲ್ಲಿ ಸೇರಿಕೆಯ ನಿಯಮಗಳಿಗೆ ಒಳಗಾಗುವ ಉಂಟು ಮಾಡುವ ಭೇದವನ್ನು ನಾವು ಕಂಡು ಹಿಡಿಯಬೇಕು.

ಕನ್ನಡ ವ್ಯಾಕರಣ ಪುಸ್ತಕಗಳಲ್ಲಿ ಗೋಚರಿಸುವ ಗಂಗೋರ್ಮಿ, ಮೇಘೌಘ, ಮಹೌಜ, ಇತ್ಯಾದಿ ಕನ್ನಡ ಬರಹಗಳಲ್ಲಿ ಕಾಣದಿರುವಂತಹ ಸಂಸ್ಕೃತ ಪದಗಳನ್ನು ನಾವು ಸಂಸ್ಕೃತ ಭಾಷೆಯ ವ್ಯಾಕರಣಗಳಿಗೆ ಉದಾಹರಣೆ ಕೊಡುವಾಗ ಕನ್ನಡ ಭಾಷೆಯನ್ನು ಕಲಿಯುವ ಆಸಕ್ತಿ ಉಳ್ಳವರಿಗೆ ಇದು ತೊಂದರೆ ಉಂಟು ಮಾಡಿ ಇದರಿಂದ ಯಾವುದೇ ಉಪಯೋಗ ಆಗದ ರೀತಿ ಮಾಡುತ್ತದೆ. ಇದಲ್ಲದೆ ಕನ್ನಡ ಭಾಷೆಗೆ ಎರವಲಾಗಿ ಬಂದಿರುವ ಸಂಸ್ಕೃತ ಪದಗಳು ಸಂಸ್ಕೃತ ವ್ಯಾಕರಣಕಾರರು ಕೊಡುವ ಪಾರಿಭಾಷಿಕ ಪದಗಳನ್ನು ನಾವು ಕನ್ನಡದಲ್ಲಿ ಅದೇ ರೂಪವಾಗಿಯೇ ಬಳಸಬೇಕೆಂಬ ಅವಶ್ಯಕತೆಯಿಲ್ಲವೆಂದು ಹೇಳುತ್ತಾರೆ.

ಹಾಗೆಯೇ ಗೊಂದಲದಿಂದುಂಟಾದ ತಪ್ಪು ತಿಳುವಳಿಕೆಯನ್ನು ಬಿಡುವುದು ಕನ್ನಡ ನುಡಿ ಎಷ್ಟು ಹಳೆಯದು ಎಂದು ತಿಳಿಸಲು ಅವುಗಳಿಗೆ ಆಧಾರ ಬೇಕು ಆದರೆ ಶಾಸನಗಳು ಗ್ರಂಥಗಳು ಬರಹವೂ ಎಷ್ಟು ಪುರಾತನವಾದದ್ದು ಎಂದು ಹೇಳುತ್ತವೆಯೇ ಹೊರತು ನುಡಿಯ ಚರಿತ್ರೆಯನ್ನು ಅಲ್ಲ ಕನ್ನಡ ಭಾಷೆಯೂ ತಮಿಳು ಭಾಷೆಕ್ಕಿಂತ ಹಳೆಯ ಭಾಷೆಯಾಗಿದೆ. ಇಂದಿಗೂ ಸಹ ಕೆಲವು ನುಡಿಗಳಿಗೆ ಬರಹವೇ ಇಲ್ಲ ಇಂತಹ ನುಡಿಗಳ ಪ್ರಾಚೀನತೆಯನ್ನು ತಿಳಿಯಲು ಬರಹದ ಹಿಂದಿನ ವಿಷಯಗಳ ಸಹಾಯದಿಂದ ತಿಳಿಯಲು ಸಾಧ್ಯವಿಲ್ಲ ಆದರೆ ಹಲವು ವಿದ್ವಾಂಸರು ಬರಹವನ್ನು ಬಳಸದ ನುಡಿಗಳಿಗೆ ಹಿನ್ನಡವಳಿಯೇ ಇಲ್ಲವೆಂದು ವಾದಿಸುತ್ತಿರುವುದು ಹಲವಾರು ಗೊಂದಲಗಳಿಗೆ ಕಾರಣವಾಗಿದೆ.

ಕನ್ನಡಿಗರೆಲ್ಲರೂ ಬರಹವನ್ನು ಕಲಿಯುವಂತಾಗಬೇಕು ಕನ್ನಡ ಬರಹವೂ ಉನ್ನತ ವರ್ಗದವರ ಬಳಕೆಯಲ್ಲಿತ್ತು ಮಧ್ಯಮವರ್ಗದವರು ಬಳಸತೊಡಗಿದರೂ ಆದರೂ ಇಂದಿಗೂ ಕೆಳವರ್ಗದ ಜನರಲ್ಲಿ ಕೆಲವರು ಓದಲು-ಬರೆಯಲು ಕಲಿತ್ತಿದ್ದರು. ಕೆಳವರ್ಗದ ಎಲ್ಲರಿಗೂ ಬರಹವೂ ದೊರೆತಿಲ್ಲ. ಇದಕ್ಕೆ ಕಾರಣವೇನೆಂದು ಪರಿಶೀಲಿಸಿ ಇದಕ್ಕೆ ಪರಿಹಾರವನ್ನು ಕಂಡುಕೊಂಡು ಕನ್ನಡವೂ ಎಲ್ಲರ ಕನ್ನಡವಾಗಬೇಕು ಕನ್ನಡದಲ್ಲಿ ಎರವಲು ಪದಗಳ ಬಳಕೆಯೂ ಅಧಿಕವಾಗಿದೆ ಇಂತಹ ಎರವಲು ಪದಗಳನ್ನು ಕಡಿಮೆ ಮಾಡಬೇಕು ನಮ್ಮ ಕನ್ನಡ ಭಾಷೆಯಲ್ಲಿ ಹೆಚ್ಚಾಗಿ ಸಂಸ್ಕೃತದ ಎರವಲು ಪದಗಳನ್ನು ನಾವು ಕಾಣುತ್ತೇವೆ ತುಂಬಾ ಸುಲಭವಾದ ಹಾಗೂ ಎಲ್ಲರಿಗೂ ಅರ್ಥವಾಗುವ ಕನ್ನಡ ಪದಗಳನ್ನೇ ಬಳಸಬೇಕು.

**ಉದಾ :** ಗಣಿತದಲ್ಲಿ ಕೂಡಿಸು ಮತ್ತು ಕಳೆ ಎಂಬ ಸುಲಭವಾದ ಕನ್ನಡ ಪದಗಳಿದ್ದರೂ ನಾವು ಹೆಚ್ಚಾಗಿ ಅದಕ್ಕೆ ಬದಲು ಸಂಕಲನ ಮತ್ತು ವ್ಯವಕಲನ ಎಂಬ ಸಂಸ್ಕೃತ ಎರವಲು ಪದಗಳನ್ನು ಬಳಸುತ್ತೇವೆ. ಸಂಶೋಧನೆಯ ಬರಹಗಳಲ್ಲಿ ಬಳಸಲು ಕನ್ನಡದ್ದೇ ಆದ ಪದಗಳು ಯೋಗ್ಯವಲ್ಲ ಎಂಬ ಕನ್ನಡ ಪದಗಳ ಕುರಿತಾಗಿರುವ ಕೀಳರಿಮೆ ಈ ಪದಗಳನ್ನು ಉಂಟು ಮಾಡುವ ವಿದ್ವಾಂಸರಲ್ಲಿ ಕಾಣುವ ಸಂಸ್ಕೃತದ ವ್ಯಾಮೋಹವಾಗಿದೆ.

ಎರವಲು ಪದಗಳನ್ನು ಸ್ವೀಕರಿಸುವಾಗ ಇದರಿಂದ ಬರಹಕ್ಕೆ ತೊಂದರೆ ಉಂಟುಮಾಡುತ್ತದೇ ಹೊರತು ನುಡಿಗಲ್ಲವೆಂದು ಹೇಳುತ್ತಾರೆ. ಮಾತಿನಲ್ಲಿ ನಾವು ಹೆಚ್ಚು ಎರವಲು ಪದಗಳನ್ನು ನಾವು ಬಳಸಿದರೂ ಮಾತಿಗೆ ಇದನ್ನು ಸ್ವೀಕರಿಸುವ ಶಕ್ತಿ ಇದೆ. ಆದರೆ ಬರಹಕ್ಕೆ ಇಂತಹ ಎರವಲು ಪದಗಳನ್ನು ಪಡೆದು ಬಳಸುವ ಶಕ್ತಿ ಇರುವುದಿಲ್ಲ. ಇದರಿಂದ ಬರಹವು ಮಾತಿನಿಂದ ದೂರ ಉಳಿಯುತ್ತಾ ತನ್ನ ಜೀವಂತಿಕೆಯನ್ನು ಕಳೆದುಕೊಳ್ಳುತ್ತದೆ ಆದ್ದರಿಂದ ಎರವಲು ಪದಗಳಿಂದ ಮಾತು ಕೆಟ್ಟು ಹೋಗುತ್ತದೆ ಎಂದು ಹೇಳುವುದು ವೈಯಕ್ತಿಕ ನೆಲೆಯಲ್ಲಿ ಸರಿಯೇ ಹೊರತು ನುಡಿಯ ನೆಲೆಯಲ್ಲಿ ಅಲ್ಲ ಎಂದು ಡಿ.ಎನ್. ಶಂಕರಭಟ್ಟರ ಅಭಿಪ್ರಾಯವಾಗಿದೆ.

ಅರಿಮೆಯ ಬರಹಗಳಿಗೆ ಹೆಚ್ಚು ಹೊಸ ಪದಗಳು ಬೇಕಾಗುತ್ತದೆ ಕನ್ನಡದಲ್ಲಿ ಉಂಟು ಮಾಡುವ ಹೊಸ ಜ್ಞಾನದ ಸಂಗ್ರಹವನ್ನು ಎಲ್ಲಾ ಕನ್ನಡಿಗರೂ ಪಡೆಯಬೇಕಾದರೆ ಅವುಗಳಲ್ಲಿ ಬಳಸುವ ಪದಗಳು ಕನ್ನಡದಲ್ಲಿಯೇ ಸೃಷ್ಠಿಯಾಗುವಂತಾಬೇಕು. ಇವತ್ತಿನ ಕೆಲವು ಬರಹಗಾರರು ಸಂಸ್ಕೃತದ ಪದ ಹಾಗೂ ಪ್ರತ್ಯಯಗಳನ್ನು ಬಳಸಿ ಅವನ್ನು ಸೃಷ್ಠಿಸಿದ್ದಲ್ಲಿ ಅವು ಹೆಚ್ಚಿನ ಕನ್ನಡಿಗರನ್ನೂ ತಲುಪಲಾರದು. ಹೊಸ ಪದಗಳನ್ನು ಉಂಟು ಮಾಡುವ ಶಕ್ತಿಯೂ ಕನ್ನಡ ಭಾಷೆಗೆ ಇದೆ. ಕನ್ನಡ ಪದಗಳ ಮೇಲೆ ಇರುವ ಕೀಳರಿಮೆ ಹೋಗಬೇಕು ಎರವಲು ಪದಗಳನ್ನು ಓದುವಂತೆ ಬರೆಯಬೇಕು.

ಹೆಚ್ಚಿನ ಕನ್ನಡಿಗರೂ ಅವರ ಓದಿನಲ್ಲಿ ಅಥವಾ ಮಾತಿನಲ್ಲಿ ಎರವಲು ಪದಗಳು ಬಂದಾಗ ಮಹಾಪ್ರಾಣದ ಬದಲು ಅಲ್ಪಪ್ರಾಣವನ್ನು ಉಚ್ಚರಿಸುತ್ತಾರೆ. ಆದರೆ ಆಡುನುಡಿಯಲ್ಲಿ ಇದನ್ನು ಬಳಸಬಹುದು. ಆದರೆ ಬರಿಗೆಯಲ್ಲಿ ಉಚ್ಚರಿಸುವ ಹಾಗೆ

ಬರೆದರೆ ತಪ್ಪು ಎಂಬ ವಾದವನ್ನು ವಿರೋಧಿಸುತ್ತಾರೆ ಉಚ್ಚರಿಸುವ ಹಾಗೆಯೇ ಬರೆದರೆ ಮಾತ್ರ ಭಾಷೆಯೂ ಬದಲಾವಣೆಯನ್ನು ಹಾಗೂ ಅದರ ಕಲಿಕೆಯನ್ನು ಬಳಕೆಯನ್ನು ಸುಲಭಗೊಳಿಸಬಹುದು.

ಹೊಸ ಬರಹವನ್ನು ಸ್ವೀಕರಿಸದಿರುವವರು ಹೊಸ ಬರಹವನ್ನು ಬಳಸಲು ಪ್ರಾರಂಭಿಸಿದರೆ ಹಲವು ತೊಂದರೆಗಳಾಗುತ್ತದೆ ಎಂದು ಹೇಳುತ್ತಾರೆ. ಇದಕ್ಕೆ ಮುಖ್ಯ ಕಾರಣ ಮಾತಿಗೂ ಬರಹಕ್ಕೂ ಇರುವ ಸಂಬಂಧ ಏನು ಎಂದು ತಿಳಿದುಕೊಳ್ಳದೆಅವರ ವೈಯಕ್ತಿಕವಾಗಿ ಮೂಡಿಸುವ ಅನಿಸಿಕೆಗಳು ಮಾತ್ರ ಆದ್ದರಿಂದ ಎಲ್ಲಾ ತೊಡಕುಗಳು ನಿಜಕ್ಕೂ ತೊಡಕುಗಳಲ್ಲ ಎಂದು ಡಿ.ಎನ್. ಶಂಕರಭಟ್ಟರು ಮುಖ್ಯವಾಗಿ ಇದನ್ನು ವಿವರಿಸಿದ್ದಾರೆ ಕಡಿಮೆಯಾಗುತ್ತಿದೆ ಎಂದು ವೈಜ್ಞಾನಿಕವಾಗಿ ಮನದಟ್ಟು ಮಾಡಿದ್ದಾರೆ.

**ಅಡಿ ಟಿಪ್ಪಣಿ :**

೧.ಸಂಕ್ಷಿಪ್ತ ಕನ್ನಡ ನಿಘಂಟು. ಪ್ರಕಟಣೆ: ಕನ್ನಡ ಸಾಹಿತ್ಯ ಪರಿಷತ್ತು. ೨೦೦೧.ಪು-೨೧೯ ಮತ್ತು ೨.
೨. ಕನ್ನಡ ಬರಹವನ್ನು ಸರಿಪಡಿಸೋಣ ಡಿ.ಎನ್.ಶಂಕರಭಟ್ಟ, ಭಾಷಾ ಪ್ರಕಾಶನ, ಪು-೨೭
೩. ಅದೇ ಪು-೬೨
೪. ಕನ್ನಡ ಸಾಹಿತ್ಯ ಕೋಶ – ರಾಜಪ್ಪ ದಳವಾಯಿ ಪ್ರಕಾಶಕರು:- ದಳವಾಯಿ ಪ್ರಕಾಶನ, ಬೆಂಗಳೂರು ವಿಶ್ವವಿದ್ಯಾಲಯ ೨೦೦೮ ಪು ೨೭೭
೫. ಕನ್ನಡ ಸಾಹಿತ್ಯ ಚರಿತ್ರೆ – ರಂ.ಶ್ರೀ. ಮುಗಳಿ ಪ್ರಕಾಶಕರು ಗೀತಬುಕ್ ಹೌಸ್,ಮೈಸೂರು ೨೦೦೮ ಪು ೩೭
೬. ಕನ್ನಡ ನುಡಿಯ ಬಗೆಗೆ ಚಿಂತನೆ – ಡಿ.ಎನ್.ಶಂಕರಭಟ್
ಪ್ರಕಾಶಕರು :- "ಸುವರ್ಣ ಕರ್ನಾಟಕ" ಸಂದರ್ಭದಲ್ಲಿ ಕರ್ನಾಟಕ ಸರ್ಕಾರದ ಪರವಾಗಿ ಕೆ.ಆರ್.ನಿರಂಜನ, ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಂದ ಪ್ರಕಟ –೨೦೦೬ಪು ೩

# ಅಧ್ಯಾಯ ೩

## ಬದಲಾದ ಬರಹದ ರೂಪಗಳು

## * ಸಂಸ್ಕೃತ ಪದಗಳಿಗೆ ಪರ್ಯಾಯವಾಗಿ ಕನ್ನಡ ಪದಗಳನ್ನು ಬಳಸುವುದು

ಕನ್ನಡ ಬರಹವೂ ಸಾಮಾಜಿಕ ಕಾರಣಗಳಿಂದ ಉನ್ನತವರ್ಗದವರ ಬರಹವಾಗಿಯೇ ಉಳಿದಿದೆ. ಕೆಳವರ್ಗದವರ ಬರಹವಾಗದಿರಲು ಕಾರಣ ಬಡತನ ಹಾಗೂ ಅಜ್ಞಾನವೇ ಕಾರಣವಾಗಿದೆ. ದಿನದಿಂದ ದಿನಕ್ಕೆ ಈ ಬರಹ ಸಾಮಾನ್ಯ ಜನರ ಮಾತಿನಿಂದ ಹೆಚ್ಚು ಭಿನ್ನವಾಗುತ್ತಿರುವುದು ಶೋಚನೀಯ ಸ್ಥಿತಿ.

ಬದುಕಿನಲ್ಲಿ ಬರಿಗೆಗೆ ಇಷ್ಟೊಂದು ಪ್ರಾಮುಖ್ಯತೆ ಕೊಡಲು ಕಾರಣಗಳಿವೆ. ಮಾತು ಮತ್ತು ಬರಹಗಳ ನಡುವಿನ ಅಂತರ ಹಾಗೂ ಭಿನ್ನತೆಗಳನ್ನು ಹಾಗೂ ಇದರ ಇತಿಹಾಸವನ್ನು ತಿಳಿಯಲು ಇಂದಿಗೂ ವಿದ್ವಾಂಸರಲ್ಲಿ ಗೊಂದಲಗಳಿವೆ. ಭಾಷೆ ಎಂಬುದು ಮುಖ್ಯವಾಗಿ ಮಾತಲ್ಲದೆ ಬರಹವಲ್ಲ ಮಾತು ತುಂಬಾ ಹಳೆಯದು ಬರಹ ಅದರ ನಂತರ ಬಂದಿರುವುದು.

ಮಾತು ಸ್ವಾಭಾವಿಕವಾದದ್ದೂ ಬರಹವೂ ಸ್ವಾಭಾವಿಕವಾಗಿ ಬರುವುದೂ ಇಲ್ಲ ಕನ್ನಡ ಬರಹಗಳನ್ನು ಅದರಲ್ಲಿಯೂ ಹೆಚ್ಚು ಸಂಸ್ಕೃತ ಪದಗಳನ್ನು ಬಳಸುತ್ತಿರುವ ಕನ್ನಡ ಬರಹಗಳನ್ನು ತಿಳಿದವರು. ಅದನ್ನು ತಾವು ತಿಳಿದು ಇತರರಿಗೂ ತಿಳಿಸಬಲ್ಲವರು ಕನ್ನಡ ಭಾಷಿಕ ಸಮಾಜದಲ್ಲಿ ಕೆಲವರು ಮಾತ್ರ ಕನ್ನಡದ ಮೇಲೆ ಸಂಸ್ಕೃತ ಭಾಷೆಯ ಪ್ರಭಾವ ಎಂತಹದು ಎಂಬುದನ್ನು ತಿಳಿಯುವಲ್ಲಿ ಕನ್ನಡ ಬರಹಗಳಲ್ಲಿ ಕಾಣಿಸುವ ಸಂಸ್ಕೃತ ಪದಗಳನ್ನು ಆಧಾರವಾಗಿ ತೆಗೆದುಕೊಳ್ಳಲು ಸಾಧ್ಯವಿಲ್ಲ.

ಕನ್ನಡ ಭಾಷಿಕರ ಆಡು ಮಾತಿನಲ್ಲಿ ಹೇಗೆ ಸಂಸ್ಕೃತ ಪದಗಳು ಗೋಚರಿಸುತ್ತವೆ ಎಷ್ಟು ಪದಗಳನ್ನು ಸ್ವೀಕರಿಸುತ್ತೇವೆ ಎಂಬುದನ್ನು ಮಾತ್ರವೇ ನಾವು ಆಧಾರವಾಗಿ ತೆಗೆದುಕೊಳ್ಳಬಹುದು. ಹಾಗೆಯೇ ಕನ್ನಡಕ್ಕೆ ಸಂಸ್ಕೃತ ಮೂಲವಲ್ಲ ಕನ್ನಡ ಬರಹವೂ ಸಂಸ್ಕೃತ ಭಾಷೆಯ ತೆಕ್ಕೆಯಲ್ಲಿಯೇ ಬೆಳೆದು ಬಂದಿದೆ

ಸಂಸ್ಕೃತ ಭಾಷೆಯ ಲಿಪಿಯನ್ನು ಬರವಣಿಗೆ ರೂಪದಲ್ಲಿ ಬರೆಯುವಾಗ ಬ್ರಾಹ್ಮೀ ಲಿಪಿಯನ್ನು ಮೂಲವಾಗಿ ಬಳಸುತ್ತಿದ್ದರು. ಆದ್ದರಿಂದ ಸಂಸ್ಕೃತದಿಂದ ಪಡೆದ ಪದಗಳಿಗೆ ಕನ್ನಡ ಭಾಷೆಯಲ್ಲಿ ವಿಶಿಷ್ಟವಾದ ಸ್ಥಾನ ದೊರೆಯಿತು.

ಸಂಸ್ಕೃತ ಪದಗಳನ್ನು ನಾವು ಉಚ್ಚರಿಸುವ ಹಾಗೆ ಬರೆಯುವ ಬದಲು ಹೆಚ್ಚು ಸಂಸ್ಕೃತ ಬರಹದ ಹಾಗೆ ಬರೆಯುತ್ತೇವೆ. **ಉದಾ :** ವಿಶೇಷ ಎಂಬುದನ್ನು ವಿಶೇಶ ಎಂದು ಉಚ್ಚರಿಸುತೇವೆ ಹಾಗೆಯೇ ಕೃತಿ ಎಂಬುದನ್ನು ಕ್ರುತಿ ಹಾಗೂ ಭ್ರಮೆ ಎಂಬುದನ್ನು ಬ್ರಮೆ ಎಂಬುದಾಗಿ ಓದುತ್ತೇವೆ.

ಹಾಗೆಯೇ ಸಂಸ್ಕೃತ ಪದಗಳಿಗೆ ಪರ್ಯಾಯವಾಗಿ ಕನ್ನಡ ಪದಗಳನ್ನು ಬಳಸುವ ವೈಜ್ಞಾನಿಕ ಆಲೋಚನೆಯನ್ನು ಕನ್ನಡ ಬರಹವನ್ನು ಸರಿಪಡಿಸುವಲ್ಲಿ ಅಳವಡಿಸಿಕೊಂಡಿದ್ದಾರೆ. **ಉದಾ : ವ್ಯಾಕರಣ** ಎಂಬ ಪದದ ಬದಲಿಗೆ **ಸೊಲ್ಲರಿಮೆ** ಎಂಬ ಪದವನ್ನು ಬಳಸಿದ್ದಾರೆ ಹಾಗೆಯೇ ಮಾತು ಎಂಬ ಪದಕ್ಕೆ ಪರ್ಯಾಯವಾಗಿ **ಸೊಲ್ಲು** ಎಂಬುದನ್ನು ಬಳಸಿರುವುದು ವಿಭಕ್ತಿ ಪ್ರತ್ಯಯಕ್ಕೆ **ಒಟ್ಟನ್ನು** ಎಂದು ಹೇಳಿರುವುದನ್ನು ಗಮನಿಸಬಹುದು

ಧ್ವನಿ ಪದಕ್ಕೆ **ಉಲಿ** ಎಂದು ಬಳಸಲಾಗಿದೆ ವಿಜ್ಞಾನ ಪದಕ್ಕೆ ಅರಿಮೆ ಎಂದು ಬಳಸಿರುವುದು ಹಾಗೂ ಹೀಗೆ ಕ್ರಮವಾಗಿ ಸುಲಭ-**ಸುಳು,** ಪ್ರಶ್ನೆ-**ಕೇಳ್ವೆ,** ಸಂಶೋಧನೆ-**ಅರಕೆ,** ವಿಜ್ಞಾನಿ-**ಅಂಗ,** ಪಾರಿಭಾಷಿಕಪದ-**ಅರಿಮೆಯಪದ,** ಪರೀಕ್ಷಿಸು-**ಆರಯ್ಯು,** ರಚನೆ-**ಇಟ್ಟಳ,** ಪುನರುಕ್ತಿ-**ಇನ್ನುಡಿಹ,** ದ್ವಿಭಾಷಿ-**ಇರ್ನುಡಿಗ,** ವರ್ತಮಾನ ಕಾಲ-**ಈ ಪೊತ್ತು,** ಉಚ್ಚಾರಣೆ – **ಉಲಿಪು,** ಗಣಕ-**ಎಣ್ಣುಕ,** ಉದ್ದರಣ ಚಿಹ್ನೆ – **ಎತ್ತುಗೆಯ ಗುರುತು,** ಉದಾಹರಣೆ ಎತ್ತುಗೆ, ಕ್ರಿಯಾಪದ – **ಎಸಕಪದ,** ಶೈಲಿ-**ಒಡ್ಡವ,** ಮಾಧ್ಯಮ-**ಒಯ್ಯುಗೆ,** ಏಕೋಕ್ತಿ-**ಒರ್ರೂಳು,** ಉಪಶೀರ್ಷಿಕೆ-**ಒಳಒಕ್ಕಣೆ,** ಕ್ರಮ-**ಓರಣ,** ನಿಯಮ-**ಕಟ್ಟಲೆ,** ಸಂದರ್ಭ-**ಕುಳ್ಳಿಹ,** ಸಾಹಿತ್ಯ-**ನಲ್ಬರಹ,** ಭಾಷಾಂತರಿಸು-**ನುಡಿಮಾರು,** ಶಬ್ದಕೋಶ-**ಪದನೆರಕೆ,** ಪಾತ್ರ-**ಪಾಂಗು,** ವರ್ಣಮಾಲೆ-**ಬರಿಗೆಪಟ್ಟಿ,** ಅಕ್ಷರ-ಬರಿಗೆ, ಪ್ರಜಾಪ್ರಭುತ್ವ-**ಮಂದಿಯಾಳ್ವಿಕೆ,** ನಾಮಪದ-**ಹೆಸರುಪದ,** ವ್ಯಂಜನ-**ಮುಚ್ಚುಲಿ,** ಸಂಭಾಷಣೆ-**ಸೂಳುನುಡಿ,** ಭೂತಕಾಲ-**ಹಿಂಬೊತ್ತು,** ಭವಿಷ್ಯತ್‌ಕಾಲ-**ಮುಂಬೊತ್ತು,** ವಿದ್ಯಾರ್ಥಕ – **ಅರಿಕೆರೂಪ,** ಧಾತು-**ಬೇರು,** ಸಂಕೀರ್ಣ-**ಸಿಕ್ಕಲು,** ನಿಷೇಧಾರ್ಥಕ-**ಅಲ್ಲಗಳೆತ,** ತಾರ್ಕಿಕ-**ಆರಯ್ಗ,** ರಚನೆ – **ಇಟ್ಟಳ,** ಅರ್ಥ ಸಂದಿಗ್ಧತೆ – **ಇಪ್ಪುರುಳ,**

ದ್ವಿರುಕ್ತಿ–**ಇಮ್ಮಡಿರೂಪ**, ಕರ್ಮ–**ಈಡು**, ನಪುಂಸಕಲಿಂಗ–**ಜಿಳಿಕೆಗುರ್ತ**, ವಿರುದ್ಧಾರ್ಥಕ – **ಎದುರುಹುರುಳು**, ಕ್ರಿಯೆ –**ಎಸಕ**, ಕ್ರಿಯಾವಿಶೇಷಣ –**ಎಸಕಪರಿಚೆ**, ಏಕವಚನ–**ಓರೆಣಿಕೆ**, ಮಧ್ಯಮಪುರುಷ–**ಕೇಳುಗ**, ಪುಲ್ಲಿಂಗ–**ಗಂಡುಗುರ್ತ**, ಲಿಂಗ–**ಗುರ್ತ**, ಅಪಾದಾನ–**ಗುರಿ**, ಸಮಾಸ–**ಜೋಡುಪದ**, ಗೌರವ–**ತಕ್ಕುಮೆ**, ಸಂಬಂಧ–**ಪತ್ತುಗೆ**, ಸ್ವರೂಪ–**ಪರಿಚೆ**, ರೂಪ –**ಪರಿಜು**, ಪಾತ್ರ–**ಪಾಂಗು**, ಆತ್ಮಾರ್ಥಕ–**ಸೇರಿಸುವಪದ**, ಬಹುವಚನ–**ಹಲವೆಣಿಕೆ** ಸ್ತ್ರೀಲಿಂಗ–**ಹೆಣ್ಣುಗುರ್ತ** ತುಲನಾತ್ಮಕ–**ಹೋಲಿಕೆಯ ಅಪವಾದ**

| ಸಂಸ್ಕೃತ ಪದಗಳು | ಕನ್ನಡ ಪದಗಳು |
|---|---|
| ಧ್ವನಿ | ಉಲಿ |
| ವ್ಯಾಕರಣ | ಸೊಲ್ಲಿರಿಮೆ |
| ಮಾತು | ಸೊಲ್ಲು |
| ವಿಜ್ಞಾನ | ಅರಿಮೆ |
| ಪಾರಿಭಾಷಿಕ ಪದ | ಅರಿಮೆಯ ಪದ |
| ರಚನೆ | ಇಟ್ಟಳ |
| ವರ್ತಮಾನ ಕಾಲ | ಈಪೊತ್ತು |
| ಉಚ್ಚಾರಣೆ | ಉಲಿಪು |
| ಉದಾಹರಣೆ | ಎತ್ತುಗೆ |
| ಕ್ರಿಯಾಪದ | ಎಸಕಪದ |
| ಸಾಹಿತ್ಯ | ನಲ್ಬರಹ |
| ವರ್ಣಮಾಲೆ | ಬರಿಗೆಪಟ್ಟಿ |
| ಅಕ್ಷರ | ಬರಿಗೆ |
| ನಾಮಪದ | ಹೆಸರುಪದ |
| ವ್ಯಂಜನ | ಮುಚ್ಚುಲಿ |
| ಕ್ರಿಯಾವಿಶೇಷಣ | ಎಸಕಪರಿಚೆ |
| ಏಕವಚನ | ಓರಣಿಕೆ |
| ಸಮಾಸ | ಜೋಡುಪದ |
| ನಾಮವಿಶೇಷಣ | ಹೆಸರುಪರಿಚೆ |

ಹೊರಪಡಿಕೆ, ಬಹುವಚನ – ಹಲವೇಣಿಕೆ, ಪ್ರಥಮಪುರುಷ–ಹೆರತು, ನಾಮವಿಶೇಷಣ–ಹೆಸರುಪರಿಚೆ, ಅರ್ಥ–ಹುರುಳು, ಸಂಕೀರ್ಣವಾಕ್ಯ–ಸಿಕ್ಕಲು ಸೊಲ್ಲು, ವಿಧಾನ–ಹೊಲಬು, ರೂಪಕ–ಮಾರ್ಪುರುಳು, ಸ್ವರ–ತೆರೆಯುಲಿ, ಪ್ರತ್ಯಕ್ಷ ಉದ್ಧರಣೆ–ನೇರಎತ್ತುಗೆ, ವಿರಾಮಚಿಹ್ನೆ–ಬರಹದಗುರುತು, ಹಸ್ತಾಂತರ–ಮಾರೆಡೆ, ಹೀಗೆ ಸಂಸ್ಕೃತ ಪದಗಳಿಗೆ ಕನ್ನಡ ಪದಗಳನ್ನು ಬಳಸಿರುವುದನ್ನು ಗಮನಿಸಬಹುದು.

ಕನ್ನಡ ಬರಹದ ಮೇಲೆ ಸಂಸ್ಕೃತ ಎರವಲುಗಳ ಹೊರೆಯನ್ನು ಕಡಿಮೆ ಮಾಡಬೇಕೆಂಬ ಉದ್ದೇಶದಿಂದ ನಮ್ಮದೇ ಆದ ಕನ್ನಡ ಪದಗಳನ್ನು ಪರಿಚಯಿಸಿದ್ದಾರೆ. ಆದರೂ ಸಹ ನಮ್ಮ ಭಾಷೆಯ ಮೇಲೆ ಸಂಸ್ಕೃತ ಹೊರೆ ಇವತ್ತು ಅಧಿಕವಾಗಿರುವುದನ್ನು ಕಾಣಬಹುದು. ಕನ್ನಡ ಬರಹಕ್ಕೆ ಬೇಡವಾದ ಈ ಎರವಲು ಪದಗಳಿಂದಾಗಿ ಕನ್ನಡ ಬರಿಗೆಗಳ ಮತ್ತು ಅವುಗಳಲ್ಲಿ ಉಪಯೋಗವಾಗುವ ಪದಗಳ ಬೆಳವಣಿಗೆಯು ಕುಂಠಿತವಾಗಿದೆ.

ಹೊಸ ಹೊಸ ಸಂಗತಿಗಳನ್ನು ಇಂಗ್ಲೀಷ್ ವಿವರಿಸಲು ಸುಲಭ ಅದನ್ನೇ ನಾವು ಕನ್ನಡದಲ್ಲಿ ಹೇಳಲು ಹೊರಟಾಗ ಬರಿಗೆಯೇ ಬರುವುದಿಲ್ಲವೆಂಬಂತೆ ಪುನಃ ಪುನಃ ಸಂಸ್ಕೃತದ ಎರವಲು ಪದಗಳನ್ನೇ ತಂದು ಸೇರಿಸಬೇಕಾಗುತ್ತದೆ. ಆದ್ದರಿಂದ ಸಂಪೂರ್ಣ ಕನ್ನಡ ಬರಹವೆಂದು ಹೇಳಲಾಗದು ಕನ್ನಡ ಓದುಗರಲ್ಲಿ ಕನ್ನಡ ಪದಗಳ ಕುರಿತಾಗಿರುವ ಈ ಕೀಳರಿಮೆಯನ್ನು ನಾವು ಹೋಗಲಾಡಿಸಿದರೇ ಕನ್ನಡ ಬರಹಗಾರರು ಹೆಚ್ಚು ಹೆಚ್ಚು ಕನ್ನಡದವೇ ಪದಗಳನ್ನು ಬಳಸಲು ಪ್ರಯತ್ನಿಸುತ್ತಾರೆ.

ಸಂಸ್ಕೃತ ಎರವಲುಗಳು ಬಳಕೆ ಬರಹಕ್ಕೆ ಮೇಲ್ಮೆಯನ್ನು ತರುವುದೆಂಬ ಕೆಟ್ಟ ಅಭಿಪ್ರಾಯವನ್ನು ಬಿಟ್ಟುಕೊಡಬೇಕಾಗಿದೆ. ಇಂತಹ ಪದಗಳನ್ನು ನಾವು ಹೆಚ್ಚು ಹೆಚ್ಚು ಬಳಸುವುದರಿಂದ ಕನ್ನಡ ಭಾಷೆಗೆ ಸಿಗಬೇಕಾದ ಹೆಚ್ಚುಗಾರಿಕೆ ಸಿಗುವುದಿಲ್ಲ. ಎಲ್ಲಾ ವಿಷಯಗಳನ್ನು ತಿಳಿಸಲು ಕನ್ನಡ ಬರಿಗೆಯಲ್ಲಿ ಕನ್ನಡ ಪದಗಳನ್ನೇ ಬಳಸಬೇಕಾದಲ್ಲಿ ಸಂಸ್ಕೃತ ಮೋಹವನ್ನು ಬಿಟ್ಟರೆ ಒಳ್ಳೆಯದು ಎಂದು ಹಾಗೂ ಎಲ್ಲಾ ಹೊಸ ರೂಪಗಳಿಂದ ಕನ್ನಡ ಬರಹಗಾರರಿಗೆ ನೆರವಾಗಬೇಕೆಂಬ ಚಿಂತನೆ ಡಿ.ಎನ್ ಶಂಕರಭಟ್ಟರದ್ದು.

ತುಂಬಾ ಜನರಿಗೆ ಬರೆಯುವ ಕಾರ್ಯ ತಾಯಿ ಮಾತಿನಲ್ಲೂ ತುಂಬಾ ತೊಂದರೆ ಅನಿಸುತ್ತದೆ. ಇದಕ್ಕೆ ಕಾರಣ ನಾವು ಮಾತನಾಡುವ ಹಾಗೆಯೇ ಬರೆದರೆ ಅದು ಬರಿಗೆಯಾಗುವುದಿಲ್ಲ. ಮಾನವನ ಮನಸ್ಸಿನ ಭಾವನೆ, ಅಭಿಪ್ರಾಯ, ತಿಳುವಳಿಕೆಯನ್ನು ಹೇಳಲು ನಿಶ್ಚಿತವಾದ ರಚನೆಯುಳ್ಳ ಬರಿಗೆಯಾಗಿರಬೇಕು. ಇದಕ್ಕಾಗಿ ಬರಹಗಾರರು ಹಲವು ಬಗೆಯ ಕೌಶಲವನ್ನು ಅಳವಡಿಸಿಕೊಳ್ಳಬೇಕು.

ಕನ್ನಡದವೇ ಆದ ಪದಗಳನ್ನು ಹಾಗೂ ಪ್ರತ್ಯಯಗಳನ್ನು ಬಳಸಿ ಪಾರಿಭಾಷಿಕ ಪದಗಳನ್ನು ಉಂಟು ಮಾಡಿದಾಗ ಯಾವುದೇ ಸಮಸ್ಯೆಗಳು ಆಗುವುದಿಲ್ಲ. ಕನ್ನಡಕ್ಕೆ ಬೇಕಾಗುವ ಎಲ್ಲಾ ಬಗೆಯ ಭಿನ್ನತೆಗಳನ್ನೂ ಅದರಲ್ಲಿ ಉಪಯೋಗಿಸುವ ಪ್ರತ್ಯಯಗಳ ಮೂಲಕ ಸೂಚಿಸಲು ಬರುತ್ತದೆ. ಸಂಸ್ಕೃತದಲ್ಲಿ ಸಂಸ್ಕೃತ ನುಡಿಗೆ ಬೇಕಾಗುವ ಭಿನ್ನತೆಯನ್ನು ಸೂಚಿಸಲು ಬರುತ್ತದೆ. ಅಲ್ಲದೆ ಕನ್ನಡದಂತಹ ಬೇರೆ ನುಡಿಗಳಿಗೆ ಬೇಕಾಗುವ ಭಿನ್ನತೆಗಳಲ್ಲಿ ಎಲ್ಲವನ್ನೂ ಸೂಚಿಸಲು ಬರುವುದಿಲ್ಲ.

ಮಕ್ಕಳು ತಮ್ಮ ಬೆಳವಣಿಗೆಯಲ್ಲಿಯೇ ಪ್ರಥಮವಾಗಿ ಮಾತೃ ಭಾಷೆಯನ್ನು ಕಲಿಯುತ್ತದೆ ಹಾಗೂ ಶೈಕ್ಷಣಿಕ ಪರಿಸರದಲ್ಲಿ ಇಂಗ್ಲೀಷ್, ಹಿಂದಿ ಮೊದಲಾದ ಎರಡನೇ ಅಥವಾ ಮೂರನೇ ಭಾಷೆಯನ್ನು ಕಲಿಯುವುದರಲ್ಲಿ ಹಲವಾರು ವ್ಯತ್ಯಾಸಗಳಿವೆ. ಹಾಗೆ ಭಾಷೆಯನ್ನು ಕಲಿಯುವುದಕ್ಕೂ ಓದುವುದಕ್ಕೂ ಬರೆಯುವುದಕ್ಕೂ ಹಲವು ವ್ಯತ್ಯಾಸಗಳಿವೆ. ಈ ರೀತಿಯಾದ ಹಲವಾರು ಸಮಸ್ಯೆಗಳು ನಮ್ಮ ಪಠ್ಯಕ್ರಮದಲ್ಲಿ ಗೋಚರಿಸುತ್ತವೆ.

ಕನ್ನಡ ವ್ಯಾಕರಣವೆಂದು ಕನ್ನಡಕ್ಕೆ ಸ್ವಲ್ಪವೂ ಅನ್ವಯಿಸದ ವಿಷಯಗಳನ್ನು ಹೇಳಿಕೊಡಲಾಗುತ್ತದೆ. ನಿಜಕ್ಕೂ ಒಂದು ಭಾಷೆಯಲ್ಲಿ ಪದಗಳನ್ನು ಪದರೂಪಗಳನ್ನು ಮತ್ತು ವಾಕ್ಯಗಳನ್ನು ಹೇಗೆ ರಚಿಸಲಾಗುತ್ತದೆ ಎಂಬುದನ್ನು ವ್ಯಾಕರಣ ಹೇಳಿಕೊಡಬೇಕು. ಆದರೆ ಕನ್ನಡದ ತರಗತಿಗಳಲ್ಲಿ ಹೇಳಿಕೊಡುತ್ತಿರುವ ವ್ಯಾಕರಣವು ಕನ್ನಡಭಾಷೆಯ ಮಟ್ಟಿಗೆ ತೀರ ಅಗತ್ಯವೆನಿಸದ ಕೆಲವು ಸಂಸ್ಕೃತ ಭಾಷೆಗೆ ಸಂಬಂಧಿಸಿದ ವ್ಯಾಕರಣದ ವಿಷಯಗಳನ್ನು ತಿಳಿಸುತ್ತದೆ. ಇದರಿಂದ ಭಾಷೆ ಮತ್ತು ಬರಹಗಳನ್ನು ಕಲಿಸುವ ವಿಧಾನದಲ್ಲಿ ಹಲವಾರು ಗೊಂದಲಗಳನ್ನು ಉಂಟು ಮಾಡುತ್ತದೆ.

ಭಾಷೆ ಮತ್ತು ಭಾಷೆಯೂ ಬಳಸುವ ಬರಹಗಳ ನಡುವೆ ಬಹಳಷ್ಟು ವ್ಯತ್ಯಾಸಗಳಿವೆ ಕನ್ನಡ ಭಾಷೆಯ ಚರಿತ್ರೆ ಮತ್ತು ಕನ್ನಡ ಲಿಪಿಯ ಚರಿತ್ರೆ ಈ ಎರಡು ಬೇರೆ ಬೇರೆಯಾಗಿದೆ ಕನ್ನಡದಲ್ಲೂ ಭಾಷೆ ಮತ್ತು ಬರಹದ ನಡುವೆ ಇರುವ ಭಿನ್ನತೆಯನ್ನು ಗ್ರಹಿಸಿಕೊಳ್ಳಲು ಪ್ರಯತ್ನಿಸದೆ ಹಳೆಯ ಮಾದರಿಯ ವರ್ಣಮಾಲೆಯನ್ನು ಬರೆದಿರುವುದು ಮುಖ್ಯ ದೋಷವಾಗಿದೆ. ಇದನ್ನು ಹಿಂಬಾಲಿಸಿದ ನಾವು ಸಹ ಕನ್ನಡ ಭಾಷೆಯ ಸ್ವಂತಿಕೆ ಕಳೆದುಕೊಂಡು ಸಂಸ್ಕೃತದ ಎರವಲು ಪದಗಳನ್ನೇ ಬಳಸಿ ನಮ್ಮ ಭಾಷೆಯಲ್ಲಿಯೇ ಪದಗಳನ್ನು ಸೃಷ್ಟಿಸಿಕೊಳ್ಳುವ ಚಿಂತನೆ ಹಾಗೂ ಆಲೋಚನೆಯನ್ನು ಮೊಟಕುಗೊಳಿಸಿಕೊಳ್ಳುತ್ತಿದ್ದೇವೆ.

ಕನ್ನಡ ಭಾಷೆಯನ್ನು ಬರೆಯಲು ನಾವು ಇಂದು ಬಳಸುತ್ತಿರುವ ಬರಹವೂ ಕನ್ನಡ ಭಾಷೆಗೆ ಎಂದು ತಯಾರಾದುದುದಲ್ಲ. ಅಶೋಕನ ಕಾಲದಲ್ಲಿ ಉಪಯೋಗದಲ್ಲಿದ್ದ ಬ್ರಾಹ್ಮಿ ಲಿಪಿಯನ್ನು ಇಲ್ಲವೇ ಈ ಬ್ರಾಹ್ಮೀ ಲಿಪಿಗೆ ತುಂಬಾ ಸಮೀಪವಾದ ಲಿಪಿಯನ್ನು ನಮ್ಮ ಪೂರ್ವಜರು ಸ್ವಲ್ಪ ಬದಲಾವಣೆಗಳೊಂದಿಗೆ ನಮ್ಮ ಭಾಷೆಗೆ ಅಳವಡಿಸಿಕೊಂಡಿರುತ್ತಾರೆ. ಹೀಗೆಯೇ ಲಿಪಿಯ ರಚನಾಕ್ರಮದಲ್ಲಿ ಇಂದಿಗೂ ಯಾವುದೇ ಬದಲಾವಣೆಗಳು ನಡೆದಿಲ್ಲ. ಆದರೆ ಅವುಗಳ ಸಂಜ್ಞೆಗಳಲ್ಲಿ ಮಾತ್ರ ಹಲವು ಬದಲಾವಣೆಗಳಾಗಿವೆ.

ನಾವು ಭಾರತದಲ್ಲಿ ಯಾವುದೇ ಒಂದು ಭಾಷಿಕ ಸಮುದಾಯದವರು ಅನ್ಯಭಾಷೆಯ ಪದಗಳನ್ನು ಸ್ವೀಕರಿಸಿ ಬಳಸುವಾಗ ತಮ್ಮ ಭಾಷೆಯ ಧ್ವನಿರಚನೆ ಮತ್ತು ಪದರಚನೆಯ ನಿಯಮಗಳಿನುಗುಣವಾಗಿ ಅನ್ಯಭಾಷಾ ಸಾಮಗ್ರಿಗಳನ್ನು ಹೊಂದಿಸಿಕೊಂಡು ಉಚ್ಚರಿಸುತ್ತಾರೆ. ಆದುದರಿಂದ ಅನ್ಯಭಾಷೆಯ ಪದಗಳು ಅನೇಕ ಬಗೆಯ ವ್ಯತ್ಯಾಸಗಳನ್ನು ಪಡೆದು ಬಳಕೆಗೆ ಬರುತ್ತದೆ. ರಾಜಕೀಯ, ಆಡಳಿತ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ತಂತ್ರಜ್ಞಾನ, ವೈಜ್ಞಾನಿಕ ಕ್ಷೇತ್ರಗಳಲ್ಲಿ ಬಳಕೆಯಾಗುವ ಪದಗಳನ್ನು ಸಾಂಸ್ಕೃತಿಕ ಪದಗಳಾಗಿರುತ್ತವೆ.

ಯಾವುದೇ ಒಂದು ಭಾಷಿಕ ಸಮುದಾಯದವರು ಅನ್ಯಭಾಷಿಕ ಸಮುದಾಯದವರಿಂದ ಹೇರಳವಾಗಿ ಸಾಂಸ್ಕೃತಿಕ ಪದಗಳನ್ನು ಸ್ವೀಕರಿಸುತ್ತಾರೆ ದೇಹದ ಅಂಗಗಳು, ಸಂಖ್ಯಾವಾಚಕಗಳು, ಕೌಟುಂಬಿಕ ರಕ್ತ ಸಂಬಂಧ ಸೂಚಕ ಪದಗಳು,

ಕ್ರಿಯಾಪದಗಳು, ಸರ್ವನಾಮಗಳನ್ನು ನಿತ್ಯೋಪಯೋಗಿ ಪದಗಳನ್ನು ದಿನಬಳಕೆಯ ಇಂತಹ ಪದಗಳನ್ನು ಅನ್ಯಭಾಷೆಗಳಿಂದ ಸಾಮಾನ್ಯವಾಗಿ ಸ್ವೀಕರಿಸುವುದಿಲ್ಲ. ನಿತ್ಯೋಪಯೋಗಿ ಪದಗಳು ಆಯಾ ಆಯಾ ಭಾಷಿಕ ಸಮುದಾಯದ ಮಾತ್ರ ಭಾಷೆಗೆ ಸೇರಿದ ನುಡಿಗಳಾಗಿರುತ್ತದೆ.

ಎರವಲು ಪದಗಳು ಅನ್ಯಭಾಷೆಯ ಪದಗಳನ್ನು ನೇರವಾಗಿ ಅಥವಾ ಪದ ರೂಪದಲ್ಲಿ ವ್ಯತ್ಯಾಸ ಮಾಡಿಕೊಂಡು ಸ್ವೀಕರಿಸುವ ಪದರೂಪದಲ್ಲಿ ವ್ಯತ್ಯಾಸ ಎಂದರೆ ಪದದ ಧ್ವನಿಮಾ ಮತ್ತು ಆಕೃತಿಮಾಗಳಲ್ಲಿ ಉಂಟಾಗುವ ವ್ಯತ್ಯಾಸವೆಂದು ಅರ್ಥ ಕನ್ನಡ ಭಾಷಿಕ ಸಮುದಾಯದವರು ಸಂಸ್ಕೃತ, ಪ್ರಾಕೃತ, ಅರಾಬಿಕ್, ಪರ್ಷಿಯನ್, ಪೋರ್ಚುಗೀಸ್, ಇಂಗ್ಲೀಷ್ ಭಾಷೆಗಳಿಂದ ಸಾವಿರಾರು ಪದಗಳನ್ನು ಎರವಲಾಗಿ ಪಡೆದು ಬಳಸುತ್ತಿದ್ದಾರೆ.

ಸಂಸ್ಕೃತ ಭಾಷೆಯಿಂದ ಪದಗಳನ್ನು ಕನ್ನಡಿಗರು ಎರಡು ರೀತಿಯಲ್ಲಿ ಸ್ವೀಕರಿಸಿದ್ದಾರೆ ಇದನ್ನು ತತ್ಸಮ ಮತ್ತು ತದ್ಭವವೆಂದು ಕರೆಯುತ್ತಾರೆ. ತತ್ಸಮ ಪದವು ಸಂಸ್ಕೃತ ಮತ್ತು ಕನ್ನಡ ಈ ಎರಡು ಭಾಷೆಗಳಲ್ಲಿಯೂ ಒಂದೇ ರೂಪದಲ್ಲಿ ಅಥವಾ ಪದದ ಕೊನೆಯಲ್ಲಿ ಧ್ವನಿ ವ್ಯತ್ಯಾಸವನ್ನು ಹೊಂದಿ ಕನ್ನಡಿಗರಲ್ಲಿ ಬಳಕೆಯಾಗುತ್ತಿರುವ ಪದಗಳಾಗಿವೆ.

**ಉದಾ :** ಆಕಾಶ, ಪುಸ್ತಕ, ಕಮಲ – ಎರಡು ಭಾಷೆಯಲ್ಲೂ ಒಂದೇ ರೂಪದ ಪದಗಳು

| ೨ – ಸಂಸ್ಕೃತ | – ಕನ್ನಡ |
|---|---|
| ಆ | – ಎ |
| ಮಾಲಾ | – ಮಾಲೆ |
| ಈ | – ಇ |
| ಭಾರತೀ | – ಭಾರತಿ |
| ಅ | – ಎ |
| ಪ್ರಶ್ನಾ | – ಪ್ರಶ್ನೆ |

ಉದಾ :

ಹೀಗೆ ಸಂಸ್ಕೃತದಿಂದ ಕನ್ನಡಕ್ಕೆ ಸ್ವೀಕೃತವಾಗುವಾಗ ಪದರೂಪದಲ್ಲಿ ಹೆಚ್ಚಿನ ಧ್ವನಿ ವ್ಯತ್ಯಾಸಗಳನ್ನು ಹೊಂದಿ ಕನ್ನಡಿಗರಲ್ಲಿ ಮಾತ್ರ ಬಳಕೆಯಲ್ಲಿರುವ ಪದಗಳು ತದ್ಭವ ಪದಗಳಾಗಿವೆ. ಸಂಸ್ಕೃತದಿಂದ ನಿಷ್ಪನ್ನಗೊಂಡ ಪದಗಳಾಗಿದೆ.

ಉದಾ :

| ಸಂಸ್ಕೃತ | – | ಕನ್ನಡ |
|---|---|---|
| ಅಕ್ಷರ | – | ಅಕ್ಕರ |
| ರಾಕ್ಷಸ | – | ರಕ್ಕಸ |
| ವ್ಯವಸಾಯ | – | ಬೇಸಾಯ |

ಇತ್ಯಾದಿ

ಸಂಸ್ಕೃತ ಭಾಷೆಯಲ್ಲಿ ಮಹಾಪ್ರಾಣಯುಕ್ತವಾಗಿ ಬಳಕೆಯಲ್ಲಿದ್ದ ಪದಗಳು ಕನ್ನಡ ಭಾಷಿಕ ಸಮುದಾಯದಲ್ಲಿ ಸ್ವೀಕೃತಗೊಂಡಾಗ, ಕನ್ನಡಿಗರ ಬಾಯಲ್ಲಿ ಅಲ್ಪಪ್ರಾಣಯುಕ್ತವಾಗಿ ಉಚ್ಚಾರಣೆಗೊಳ್ಳುತ್ತಿವೆ. ಏಕೆಂದರೆ ಕನ್ನಡ ಭಾಷೆಯ ಧ್ವನಿ ವ್ಯವಸ್ಥೆಯಲ್ಲಿ ಮಹಾಪ್ರಾಣಗಳು ಇಲ್ಲ ಈ ರೀತಿ ಅನ್ಯಭಾಷೆಯ ಪದದಲ್ಲಿನ ಧ್ವನಿಮಾಗಳು ಸ್ವೀಕರಿಸುವ ಭಾಷೆಯಲ್ಲಿ ಇಲ್ಲದಿದ್ದಾಗ ತಮ್ಮಲ್ಲಿ ಅದಕ್ಕೆ ಹತ್ತಿರವಾಗಿರುವ ಧ್ವನಿಯನ್ನು ಸಮೀಕರಿಸಿಕೊಂಡು ಉಚ್ಚರಿಸುತ್ತಾರೆ. ಈ ರೀತಿಯ ಧ್ವನಿ ಹೊಂದಾಣಿಕೆಯ ಸಹಾಯದಿಂದ ಎರವಲು ಪದಗಳನ್ನು ಒಂದು ಭಾಷೆಯಲ್ಲಿ ಬಳಸುತ್ತಾರೆ.

**ಉದಾ** :- ಖಂಡ - ಕಂಡ, ಛತ್ರಿ - ಚತ್ರಿ, ಝರಿ–ಜರಿ, ಠಕ್ಕು–ಟಕ್ಕು, ಫಲ–ಪಲ, ಭಂಡಾರ–ಬಂಡಾರ, ಘಂಟೆ–ಗಂಟೆ ಇತ್ಯಾದಿ.

ಅನ್ಯಭಾಷೆಯ ಪದಗಳಿಗೆ ಸರಿ ಸಮಾನವಾದ ಅರ್ಥವನ್ನು ಸೂಚಿಸುವ ಪದಗಳನ್ನು ಭಾಷೆಯಿಂದಲೇ ಒದಗಿಸಿಕೊಂಡು ಬಳಸುತ್ತದೆ. ಪಾಶ್ಚಿಮಾತ್ಯ ದೇಶಗಳಲ್ಲಿ ಬಳಕೆಯಾಗುತ್ತಿದ್ದ ವೈಜ್ಞಾನಿಕ ಉಪಕರಣಗಳು ಕನ್ನಡ ಭಾಷಿಕ ಸಮುದಾಯದಲ್ಲಿ ಬಳಕೆಗೆ ಬಂದಾಗ ಕನ್ನಡದಲ್ಲಿ ಈಗಾಗಲೇ ಬಳಕೆಯಲ್ಲಿದ್ದ ಪದಗಳನ್ನೇ ವೈಜ್ಞಾನಿಕ ಉಪಕರಣಗಳಿವೆ ಅನ್ವಯಿಸಿ ಉಚ್ಚರಿಸಲಾಗುತ್ತಿದೆ. ಒಂದು ಭಾಷೆಯ ಇನ್ನೊಂದರಿಂದ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಭಾಷಿಕ ಸಾಮಾಗ್ರಿಗಳನ್ನು ಸ್ವೀಕರಿಸಿ ಪ್ರತಿಯಾಗಿ ತನ್ನಿಂದ ಅತಿ ಕಡಿಮೆ ಸಂಖ್ಯೆಯ ಭಾಷಿಕ ಸಾಮಾಗ್ರಿಗಳನ್ನು ನೀಡಬಹುದು.

ಇಂತಹ ಏರು–ಪೇರಿಗೆ ಆಯಾ–ಆಯಾ ಭಾಷಿಕ ಸಮುದಾಯಗಳ ರಾಜಕೀಯ, ಅಧಿಕಾರ ಆರ್ಥಿಕ ಸಂಪನ್ಮೂಲಗಳು ಕಾರಣವಾಗುತ್ತವೆ. ಕನ್ನಡ ಭಾಷಿಕ ಸಮುದಾಯದವರು ಕ್ರಿ.ಪೂ ದಿಂದ ಇಂದಿನ ತನಕ, ಅನೇಕ ಕಾಲಘಟ್ಟಗಳಲ್ಲಿ ಹಲವಾರು ಅನ್ಯಭಾಷಿಕರ ಸಮುದಾಯದ ಜೊತೆಯಲ್ಲಿ ಸಾಂಸ್ಕೃತಿಕವಾಗಿ ಸಂಬಂಧ ಮತ್ತು ಸಂಘರ್ಷಗಳನ್ನು ನಡೆಸುತ್ತಾ ಅನ್ಯಭಾಷೆ ಮತ್ತು ಅನ್ಯ ಸಂಸ್ಕೃತಿಗಳಿಂದ ಸಾವಿರಾರು ಪದಗಳನ್ನು ಸ್ವೀಕರಿಸಿ ಬಳಸುತ್ತಿದ್ದಾರೆ.

ಕನ್ನಡದ ಪದ ಸಂಪತ್ತು ಹೆಚ್ಚಾಗಿದೆ ಇಂದು ಕನ್ನಡಿಗರಾದ ನಾವು ನಮ್ಮ ದೈನಂದಿನ ಸಾಮಾಜಿಕ ವ್ಯವಹಾರದಲ್ಲಿ ಬಳಸುತ್ತಿರುವ ಕನ್ನಡ ಭಾಷೆಯಲ್ಲಿ ಶೇ೬೫ಕ್ಕಿಂತ ಹೆಚ್ಚಿನ ಪದಗಳು ಅನ್ಯಭಾಷೆಯಿಂದ ಸ್ವೀಕೃತವಾಗಿದೆ ಕನ್ನಡ–ಸಂಸ್ಕೃತ, ಕನ್ನಡ–ಪ್ರಾಕೃತ,

ಕನ್ನಡ-ಅರಾಬಿಕ್, ಕನ್ನಡ-ಪರ್ಷಿಯನ್, ಕನ್ನಡ-ಪೋರ್ಚುಗೀಸ್, ಕನ್ನಡ-ಇಂಗ್ಲೀಷ್ ಈ ರೀತಿ ಎರಡು ಭಾಷೆಗಳ ಮತ್ತು ಎರಡು ಸಂಸ್ಕೃತಿಗಳ ನೆಲೆಯಲ್ಲಿ ಉಂಟಾದ ಸಂಬಂಧಗಳಿಂದ ಕನ್ನಡ ಭಾಷೆಯೂ ಅತಿ ಹೆಚ್ಚಿನ ಪ್ರಮಾಣದಲ್ಲಿ ಅನ್ಯಭಾಷೆಯ ಪದಗಳನ್ನು ಸ್ವೀಕರಿಸಿದೆ ಅನ್ಯಭಾಷೆಯ ಪದಗಳು ಸ್ವೀಕರಣಗೊಂಡು ಅವುಗಳ ಪದರೂಪದಲ್ಲಿ ಅನೇಕ ಬಗೆಯ ಧ್ವನಿ ವ್ಯತ್ಯಾಸಗಳು ಉಂಟಾಗುವಂತೆಯೇ ಕೆಲವು ಪದಗಳು ಉಂಟಾಗುತ್ತದೆ.

**ಉದಾ :** ಅವಸರ- ಈ ಪದದ ಸಂಸ್ಕೃತ ಪದದ ಮೂಲ ಅಥವಾ "ಸಮಯ ಅವಕಾಶ" ಈ ಪದವು ಕನ್ನಡ ಭಾಷಿಕ ಸಮುದಾಯದಲ್ಲಿ "ಆತುರ" ಎಂಬ ಅರ್ಥದಲ್ಲಿ ಬಳಕೆಯಾಗುತ್ತಿದೆ ಹಾಗೆಯೇ ಮರ್ಯಾದಾ ಎಂಬ ಈ ಸಂಸ್ಕೃತ ಪದಕ್ಕೆ ಗಡಿ, ಸೀಮೆ, ಎಲ್ಲೆ, ಎಂಬ ಮೂಲ ಅರ್ಥವಿದೆ ಈ ಪದವು ಕನ್ನಡದಲ್ಲಿ ಬಳಕೆಗೊಂಡಾಗ ಗೌರವ, ಮನ್ನಣೆ ಎಂಬ ಅರ್ಥವನ್ನು ಪಡೆದಿದೆ ಮತ್ತು ಯಜಮಾನ ಎಂಬ ಸಂಸ್ಕೃತ ಪದಕ್ಕೆ ಮೂಲದಲ್ಲಿ **ಯಜ್ಞವನ್ನು ನಡೆಸುವವನು** ಎಂಬ ಅರ್ಥವಿದೆ. ಈ ಪದಗಳು ಕನ್ನಡ ಸಂದರ್ಭದಲ್ಲಿ ಬಳಕೆಗೊಂಡಾಗ ಒಡೆಯ, ಮಾಲೀಕ, ಗಂಡ, ಎಂಬ ಅರ್ಥಗಳನ್ನು ಪಡೆಯುತ್ತದೆ. ಕನ್ನಡ ಭಾಷೆಯೂ ಸಂಸ್ಕೃತ ಜನ್ಯವಲ್ಲ ಕನ್ನಡ ಭಾಷೆಯು ಮೂಲದ್ರಾವಿಡ ಎಂಬ ಭಾಷೆಯಿಂದ ಕವಲುಗೊಂಡು ಬೆಳೆದು ಸ್ವತಂತ್ರ್ಯ ಭಾಷೆಯಾಗಿ ಬಳಕೆಗೆ ಬಂದಿರುವುದು ಸ್ಪಷ್ಟವಾಯಿತು.

ಜಗತ್ತಿನ ಯಾವುದೇ ಭಾಷೆಗಳ ಕಾವ್ಯರಚನೆಯ ಸ್ವರೂಪವು ಕಾಲಗತಿಯಲ್ಲಿ ಯಾವುದೇ ಹೆಚ್ಚಿನ ಬದಲಾವಣೆಗೆ ಒಳಗಾಗುವುದಿಲ್ಲ ಕರ್ತೃಪದ, ಕರ್ಮಪದ, ಕ್ರಿಯಾಪದಗಳ ಸ್ಥಾನಗಳು ಆಯಾ ಆಯಾ ಭಾಷೆಯ ರಾಚನಿಕ ವ್ಯವಸ್ಥೆಗೆ ತಕ್ಕಂತೆ ಇರುತ್ತದೆ ಬಹಳ ವಿರಳವಾಗಿ ಒಂದೆರಡು ಬಗೆಯ ಬದಲಾವಣೆಗಳು ಅನ್ಯಭಾಷೆಯ ಸಂಪರ್ಕ ಮತ್ತು ಪ್ರಭಾವಗಳಿಂದ ಉಂಟಾಗುತ್ತದೆ. ಸಂಸ್ಕೃತ ಭಾಷೆಯ ಸಂಪರ್ಕದಿಂದ ಕನ್ನಡ ವಾಕ್ಯಗಳ ರಚನೆಯಲ್ಲಿ ಅತ್ಯಂತ ವಿರಳವಾಗಿ ಕರ್ಮಣಿ ಪ್ರಯೋಗದ ವಾಕ್ಯಗಳು ರಚನೆಗೊಂಡು ಹೊಸಗನ್ನಡದಲ್ಲಿ ಬಳಕೆಯಾಗುತ್ತಿವೆ.

ಸಂಸ್ಕೃತದ ಈ ಸಂಪರ್ಕದಿಂದ ಕರ್ತೃಪದ ಮತ್ತು ಕರ್ಮ ಪದಗಳ ವಿಭಕ್ತಿ ಪ್ರತ್ಯಯಗಳು ಬದಲಾಗುತ್ತವೆ ಮತ್ತು ಕರ್ಮಣಿ ವಾಕ್ಯದಲ್ಲಿನ ಕ್ರಿಯಾಪದಕ್ಕೆ **ಅಲ್ಪಡು/ಅಲ್ಪಟ್ಟು** ಎಂಬ ಪದ ರೂಪಗಳು ಅಧಿಕವಾಗಿ ಸೇರುತ್ತವೆ. ಎಲ್ಲಾ

ಭಾಷೆಗಳಲ್ಲಿಯೂ ಪದಗಳ ಅರ್ಥವ್ಯವಸ್ಥೆಯು ಆಯಾ ಆಯಾ ಭಾಷಿಕ ಸಮುದಾಯಗಳಿಂದ ನಿರ್ಧಾರಗೊಂಡು ಬಳಕೆಯಾಗುತ್ತದೆ. ಕಾಲಗತಿಯಲ್ಲಿ ಅತ್ಯಂತ ವಿರಳವಾಗಿ ಕೆಲವು ಪದಗಳಲ್ಲಿ ಅರ್ಥದಲ್ಲಿ ಬದಲಾವಣೆಗಳು ಸಂಭವಿಸುತ್ತದೆ. ಕಾಲಗತಿಯಲ್ಲಿ ಒಂದು ಭಾಷಾ ಸಮುದಾಯದವರು ಅನೇಕ ಭಾಷಿಕ ಸಮುದಾಯದವರ ಜೊತೆ ಸಾಮಾಜಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಸಂಪರ್ಕ ಮತ್ತು ಸಂಬಂಧಗಳನ್ನು ಪಡೆದು ವ್ಯವಹರಿಸುವಾಗ ಅನ್ಯಭಾಷಾ ಸಾಮಾಗ್ರಿಗಳನ್ನು ಪಡೆದು ತನ್ನ ಭಾಷಾ ಸಂಪತ್ತನ್ನು ಹೆಚ್ಚಿಸಿಕೊಳ್ಳುತ್ತದೆ. ಇದರಿಂದ ಉಂಟಾಗುವ ಪ್ರಮುಖ ಬದಲಾವಣೆ ಎಂದರೆ ಭಾಷೆಯಲ್ಲಿನ ಶಬ್ಧಗಳ ಸಂಖ್ಯೆ ಕಾಲ ಉರುಳಿದಂತೆ ಹೆಚ್ಚಾಗುತ್ತೆ. ಭಾಷಿಕರ ಬಳಕೆಯಲ್ಲೂ ಹೊಸ ಹೊಸ ಶಬ್ಧಗಳು ನಿರಂತರವಾಗಿ ಬಳಕೆಗೊಳ್ಳತೊಡಗುತ್ತದೆ. ಇಂತಹ ಬದಲಾವಣೆಯ ಪ್ರಕ್ರಿಯೆಯಲ್ಲಿ ಮೊದಲು ಬಳಕೆಯಾಗುತ್ತಿದ್ದ ಕೆಲವು ಶಬ್ದಗಳು ಲೋಪಗೊಳ್ಳುತ್ತಾ ಅವುಗಳ ಜಾಗದಲ್ಲಿ ಹೊಸ ಹೊಸ ಶಬ್ಧಗಳು ಅನ್ಯಭಾಷೆಯಿಂದ ಬಳಕೆಗೆ ಬರುತ್ತದೆ. ಕನ್ನಡ ಭಾಷಿಕ ಸಮುದಾಯದಲ್ಲಿ ಕಳೆದ ೧೦೦ ವರ್ಷಗಳ ಹಿಂದೆ ಬಳಕೆಯಾಗುತ್ತಿದ್ದ **ಮೂಡಣ-ಪಡುವಣ-ತೆಂಕಣ-ಬಡಗಣ** ಎಂಬ ದಿಕ್ಕನ್ನು ಸೂಚಿಸುವ ಅಚ್ಚಗನ್ನಡದ ಪದಗಳು ಈಗ ನಿತ್ಯ ಬಳಕೆಯಲ್ಲಿ ಬಹಳ ಕಡಿಮೆ ಪ್ರಮಾಣದಲ್ಲಿ ಬಳಕೆಯಾಗುತ್ತಿದೆ.

ಅನಕ್ಷರಸ್ಥರಾದ ಹಳ್ಳಿಗರ ಮಾತುಕತೆಯಲ್ಲಿ ಈ ಪದಗಳ ಬಳಕೆ ಇದೆ ಆದರೆ ಇಂದಿನ ಆಧುನಿಕತೆಯ ಸಂದರ್ಭದಲ್ಲಿ ಅಕ್ಷರವಂತರಾಗಿರುವ ಕನ್ನಡಿಗರ ಬಾಯಲ್ಲಿ **ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ** ಎಂಬ ಸಂಸ್ಕೃತ ಪದಗಳು ಈ ರೀತಿ ಅನ್ಯಭಾಷೆಗಳ ಪ್ರಭಾವದಿಂದ ಶಬ್ದ ಸಂಪತ್ತು ಅಧಿಕವಾಗುತ್ತದೆ ಹಾಗೂ ಬದಲಾವಣೆಗೊಳ್ಳುತ್ತಿದೆ. ಅನ್ಯಭಾಷೆಯಿಂದ ಕನ್ನಡಕ್ಕೆ ಬಳಕೆಗೆ ಬಂದಿರುವ ಪದಗಳ ಸಂಖ್ಯೆ ದೊಡ್ಡದಾಗಿದೆ.

ಅನ್ಯಭಾಷೆಗಳಲ್ಲಿನ ಭಾಷಿಕ ಸಾಮಾಗ್ರಿಗಳನ್ನು ಪಡೆಯುವ ಭಾಷಿಕ ಸಮುದಾಯದವರು ತನ್ನ ಮಾತೃ ಭಾಷೆಯ ಧ್ವನಿ ರಚನೆ, ಪದರಚನೆಯ ನಿಯಮಗಳಿಗೆ ಅನುಗುಣವಾಗಿ ಹೊಂದಿಸಿಕೊಂಡು ಬಳಸುತ್ತಾರೆ ಈ ರೀತಿ ಹೊಂದಿಸಿಕೊಳ್ಳುವಾಗ ಅನೇಕ ತಂತ್ರಗಳನ್ನು ವಿಧಾನಗಳನ್ನು ಅಳವಡಿಸಿಕೊಳ್ಳುತ್ತಾರೆ ಭಾಷಾ ಸ್ವೀಕರಣದಲ್ಲಿ ಕನ್ನಡ ಭಾಷೆಗೆ ಅನ್ಯಭಾಷೆಗಳಿಂದ ಹೆಚ್ಚಿನ ಪದಗಳು ಹೆಚ್ಚಿನ

ಸಂಖ್ಯೆಯಲ್ಲಿ ಬಂದಿರುವಂತೆಯೇ ಕನ್ನಡ ಅಥವಾ ದ್ರಾವಿಡ ಭಾಷೆಗಳಿಂದ ಸಂಸ್ಕೃತ ಭಾಷೆಗೆ ಕೆಲವು ಪದಗಳು ಹೋಗಿರಬಹುದೆಂದು ನುಡಿಯರಿಗರು ಭಾವಿಸಿದ್ದಾರೆ.

ಕ್ರಿ.ಪೂದಿಂದಲೂ ಸಂಸ್ಕೃತ ಭಾಷಿಕರಾದ ಆರ್ಯ ಜನಾಂಗದವರು ದ್ರಾವಿಡ ಜನಾಂಗಕ್ಕೆ ಸೇರಿದ ಕನ್ನಡಿಗರು ಸಂಬಂಧವನ್ನು ಹೊಂದಿದ್ದರ ಫಲವಾಗಿ ಆರ್ಯ ಜನಾಂಗದ ಕಲೆ, ಸಾಹಿತ್ಯ ಮತ್ತು ಧರ್ಮದ ಆಚಾರ-ವಿಚಾರಗಳು ಕನ್ನಡಿಗರ ಮೇಲೆ ಮಹತ್ತರವಾದ ಪ್ರಭಾವವನ್ನು ಬೀರಿದೆ ಹಳಗನ್ನಡದ ಬಹುತೇಕ ಕೃತಿಗಳ ರಚನೆಗೆ ಸಂಸ್ಕೃತ ಕೃತಿಗಳು ಮೂಲ ಪ್ರೇರಣೆಯಾಗಿದೆ ಹಳಗನ್ನಡದ ಕವಿಗಳೆಲ್ಲರೂ ಉಭಯ ಭಾಷಾ ಪಂಡಿತರು ಆಗಿದ್ದರು ಆದುದರಿಂದ ಕನ್ನಡದ ಬರಹದಲ್ಲಿ ಹೇರಳವಾಗಿ ಸಂಸ್ಕೃತ ಪದಗಳು ಸ್ವೀಕೃತಗೊಂಡಿದೆ. **ಉದಾ :** ಸತ್ಯ, ನ್ಯಾಯ, ಧರ್ಮ, ಆರಾಧನೆ, ಯಜ್ಞ, ಯಾಗ, ಕಾವ್ಯ, ಮೀಮಾಂಸೆ, ಪ್ರಧಾನಿ, ಮಂತ್ರಿ, ಸೇನಾಧಿಪತಿ ಇತ್ಯಾದಿ.

ನಿತ್ಯಪರಿವರ್ತನಾಶೀಲವಾದ ಭಾಷೆಯು ಭಾಷಿಕರ ಸೌಲಭ್ಯಾಕಾಂಕ್ಷೆ, ಮಿತವ್ಯಯಾಸಕ್ತಿ ಮತ್ತು ಸಾಮಾಜಿಕ ಚಲನಶೀಲತೆಯಿಂದಾಗಿ ನಾನಾಬಗೆಯ ರೂಪ ಬದಲಾವಣೆಯನ್ನು ನಿರಂತರವಾಗಿ ಹೊಂದುತ್ತಿರುತ್ತದೆ ಭಾಷೆಯ ಬದಲಾವಣೆಗಳು ಒಂದೇ ದಿನದಲ್ಲಿ ನಡೆಯುವುದಿಲ್ಲ. ಅನೇಕ ಶತಮಾನಗಳ ಅವಧಿಯಲ್ಲಿ ಮಂದಗತಿಯಲ್ಲಿ ನಡೆಯುತ್ತಿರುತ್ತದೆ ಇದುವರೆಗೆ ಲಿಖಿತ ರೂಪದಲ್ಲಿ ದಾಖಲಾಗಿರುವ ಭಾಷೆಗಳಲ್ಲಿ ಮಾತ್ರ ಅವಸ್ಥಾಂತರಗಳನ್ನು ಗುರುತಿಸಿ ವಿಶ್ಲೇಷಣೆ ಮಾಡಬಹುದಾಗಿತ್ತು.

ಪ್ರತಿಯೊಂದು ಭಾಷಿಕ ಸಮುದಾಯದವರು ತಾವು ಬಳಸುತ್ತಿರುವ ಪದಗಳಿಗೆ ಪರಂಪರೆ ಮತ್ತು ಸಂಪ್ರದಾಯದ ನೆಲೆಯಲ್ಲಿ ಅರ್ಥನೀಡಿರುತ್ತಾರೆ ಆದುದರಿಂದ ಯಾವುದೇ ಒಂದು ಪದದ ಅರ್ಥವು ಹೇಗೆ ಬಂದಿತು ಎಂದು ಹೇಳಲು ಸಾಧ್ಯವಿಲ್ಲ ಹಾಗೆಯೇ ಕ್ರಮೇಣ ಕಾಲದಿಂದ ಕಾಲಕ್ಕೆ ಪದರೂಪಗಳು, ಪದದ ಅರ್ಥಗಳು ಬದಲಾವಣೆಗೆ ಒಳಗಾಗುತ್ತದೆ ಆದ್ದರಿಂದ ಅನ್ಯಭಾಷಿಕ ಸಾಮಾಗ್ರಿಗಳ ಸ್ವೀಕರಣದಿಂದ ಭಾಷೆಯೊಂದರ ಶಬ್ಧ ಸಂಪತ್ತಿನಲ್ಲಿ ಅಪಾರವಾದ ಬದಲಾವಣೆಯನ್ನು ಉಂಟು ಮಾಡುತ್ತದೆ ಭಾಷಿಕ ಸಮುದಾಯದಲ್ಲಿ ಈ ಮೊದಲು ಬಳಕೆಯಲ್ಲಿದ್ದ ಅನೇಕ ಪದಗಳು

ಬಳಕೆಯಿಂದ ತಪ್ಪಿಹೋಗಿ, ಅವುಗಳಿಗೆ ಬದಲಾಗಿ ಅನ್ಯಭಾಷೆಯ ಹೊಸ ಹೊಸ ಪದಗಳು ಚಲಾವಣೆಗೆ ಬರುತ್ತದೆ.

ಅಡಿ ಟಿಪ್ಪಣಿ:

- ಮಾತು ಮತ್ತು ಬರಹದ ನಡುವಿನ ಗೊಂದಲ – ಡಿ.ಎನ್.ಶಂಕರಭಟ್
  ಪ್ರಕಾಶಕರು :– ಭಾಷಾ ಪ್ರಕಾಶನ, ಆರಗ, ತೀರ್ಥಹಳ್ಳಿ –೨೦೧೧. ಪು ೩೪
- ಕನ್ನಡ ನುಡಿಯ ಬಗೆಗೆ ಚಿಂತನೆ – ಡಿ.ಎನ್.ಶಂಕರಭಟ್
  ಪ್ರಕಾಶಕರು :– "ಸುವರ್ಣ ಕರ್ನಾಟಕ" ಸಂದರ್ಭದಲ್ಲಿ ಕರ್ನಾಟಕ ಸರ್ಕಾರದ ಪರವಾಗಿ ಕೆ.ಆರ್.ನಿರಂಜನ, ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಂದ ಪ್ರಕಟ – ೨೦೦೬. ಪು ೩
- ಭಾಷೆಯ ಬಗೆಗೆ ನೀವೇನು ಬಲ್ಲಿರಿ? – ಡಿ.ಎನ್.ಶಂಕರಭಟ್.
  ಪ್ರಕಾಶಕರು : ಭಾಷಾ ಪ್ರಕಾಶನ, ಹೆಗ್ಗೋಡು, ಸಾಗರ –೧೯೭೦. ಪು ೧೨೧
- ಇಂಗ್ಲೀಷ್ ಪದಗಳಿಗೆ ಕನ್ನಡದ್ದೇ ಪದಗಳು – ಡಿ.ಎನ್.ಶಂಕರಭಟ್.
  ಪ್ರಕಾಶಕರು : ಭಾಷಾ ಪ್ರಕಾಶನ, ಬಿಲ್ಲೇಶ್ವರ, ಹುಂಚ, ಹೊಸನಗರ –೨೦೦೮. ಪು ೧೩
- ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ, ಡಿ.ಎನ್.ಶಂಕರಭಟ್
  ಪ್ರಕಾಶಕರು : ಭಾಷಾ ಪ್ರಕಾಶನ.ಪು ೬೩
- ಮಿಂಚಂಚೆ : ಹೊನಲು.೪೬

## ಧ್ವನಿ, ವಾಕ್ಯ, ಪದ, ವೈಜ್ಞಾನಿಕವಾಗಿ ಆದ ಮಾರ್ಪಾಟುಗಳು

| ಸಂಸ್ಕೃತ | – | ಕನ್ನಡ |
| --- | --- | --- |
| ಆ | – | ಎ |
| ಮಾಲಾ | – | ಮಾಲೆ |
| ಈ | – | ಇ |
| ಭಾರತೀ | – | ಭಾರತಿ |
| ಅ | – | ಎ |

# ಅಧ್ಯಾಯ – ೪

## ಧ್ವನಿ, ವಾಕ್ಯ, ಪದ – ವೈಜ್ಞಾನಿಕವಾಗಿ ಆದ ಮಾರ್ಪಾಟುಗಳು

ಭಾರತದ ಎಲ್ಲಾ ಭಾಷೆಗಳು ಬ್ರಾಹ್ಮಿ ಬರಿಗೆಯಿಂದಲೇ ಬರವಣಿಗೆಯನ್ನು ರೂಢಿಸಿಕೊಂಡಿರುವುದು. ಹಾಗಾಗಿ ಬರವಣಿಗೆಗೂ ಧ್ವನಿಗೂ ಹಲವಾರು ಭಿನ್ನತೆಗಳನ್ನು ನಾವು ಗಮನಿಸಬಹುದು ಕಳೆದ ನೂರೈವತ್ತು ವರ್ಷಗಳಿಂದ ನಡೆದ ಸಂಶೋಧನೆಯ ಮೂಲಕ ಕನ್ನಡ ಹಾಗೂ ತೆಂಕಣ ಭಾರತದ ನುಡಿಗಳು ದ್ರಾವಿಡ ಗುಂಪಿಗೆ ಸೇರುತ್ತದೆಎಂದು ನುಡಿಯರಿಗರು ವಿವರಿಸಿದ್ದಾರೆ ಹಾಗೂ ನಾವು ಉಲಿದಂತೆ ಬರೆಯುವುದಿಲ್ಲ. ಆದರೆ ಬರಿಗೆಯ ರೂಪದಲ್ಲಿ ಬರೆಯುವಾಗ ಮಹಾಪ್ರಾಣವನ್ನು ಬರೆಯುತ್ತೇವೆ.

ಉಚ್ಚರಣೆಯಲ್ಲಿ ಬಳಸುವ ಅಲ್ಪಪ್ರಾಣಾಕ್ಷರಗಳನ್ನು ಬಳಸಿ ಬರೆಯುವುದರಿಂದ ಕನ್ನಡಿಗರು ತಮ್ಮ ಆಡು ನುಡಿಯಲ್ಲಿ ಚೆನ್ನಾಗಿ ಕಲಿಯುತ್ತಾರೆ. ಇದರಿಂದ ತನ್ನ ಭಾಷೆಯ ಮೇಲಿನ ಕೀಳರಿಮೆ ಕಡಿಮೆಯಾಗಿ ಅಚ್ಚಕನ್ನಡದ್ದೇ ಆದ ಧ್ವನಿಗಳನ್ನು ಬಳಸಲು ಪ್ರಾರಂಭಿಸಿದ್ದಾರೆ. ನಾವು ಜಾಗೃತರಾಗಿರುವಾಗಲೂ ಮಾತನಾಡುತ್ತಲೇ ಇರುತ್ತೇವೆ. ಕೆಲವೊಮ್ಮೆ ನಿದ್ದೆಯಲ್ಲೂ ಮಾತನಾಡುತ್ತಿರುತ್ತೇವೆ. ಅದಕ್ಕಾಗಿ ನಾವು ಯಾವುದೇ ಪ್ರಯತ್ನವನ್ನೂ ಮಾಡುವುದಿಲ್ಲ. **ಮಾನವನ ಮಾತೆಂಬುದು ಬಹಳ ಸಂಕೀರ್ಣವಾದದ್ದು.**ಮಾನವನು ಇತರ ಪ್ರಾಣಿಗಳಿಗಿಂತ ಭಿನ್ನವಾಗಿ ಕಾಣಲು ಇವನ ಮಾತು ಮತ್ತು ಬುದ್ಧಿಶಕ್ತಿಯೇ ಕಾರಣ.

ಪ್ರತಿಯೊಂದು ಪ್ರಾಣಿ ಪಕ್ಷಿಯೂ ಮಾನವನ ಹಾಗೆ ಕ್ರಮವಾಗಿ ಮಾತನಾಡದಿದ್ದರೂ ಅವುಗಳು ಮಾಡುವ ಶಬ್ದವೂ ಹಾಗೂ ನೋವಾದಾಗತಾವು ತಮ್ಮ ಬಳಗದವರೊಡನೆ ಉಲಿಗಳ ಮೂಲಕ ತಮ್ಮ ಅನಿಸಿಕೆಗಳನ್ನು ಹಂಚಿಕೊಳ್ಳುವುದನ್ನು ನಾವು ಗಮನಿಸಬಹುದು. ಮಾತಿನಲ್ಲಿ ಬಳಸುವ ಪದಗಳಿಗೆ ಅರ್ಥವಿರುತ್ತದೆ ನಮ್ಮ ಮಾತಿನಲ್ಲಿ ನಾವು ಹಲವಾರು ಪದಗಳನ್ನು ಪದಕಂತೆಗಳಾಗಿಮತ್ತು ವಾಕ್ಯಗಳಾಗಿ

ಬಳಸುತ್ತೇವೆ. ನಮ್ಮ ಮಾತಿಗೂ ಇತರ ಪ್ರಾಣಿಗಳ ಧ್ವನಿಗಳಿಗೂ ವ್ಯತ್ಯಾಸವಿದೆ. ಮಾನವನ ಮಾತಿನ ಧ್ವನಿಗಳಲ್ಲಿ ವ್ಯಾಕರಣ ನಿಯಮಗಳು ಅಡಗಿದೆ. ಆದರೆ ಈ ವ್ಯಾಕರಣ ನಿಯಮಗಳು ಪ್ರಾಣಿಗಳು ಬಳಸುವ ಮಾತಿನಲ್ಲಿ ಕಾಣಿಸುವುದಿಲ್ಲ

ಇದಲ್ಲದೆ ಇಂತಹ ಇದುವರಗೆ ನೋಡಿರದ ಇಲ್ಲವೇ ಕೇಳಿರದ ಸಾವಿರಾರು ಹೊಸ ಹೊಸ ಧ್ವನಿಗಳನ್ನು ನಾವು ಉಂಟು ಮಾಡುವ ಸಾಮರ್ಥ್ಯ ನಮ್ಮಲ್ಲಿ ಇರುತ್ತದೆ ನಿಜಕ್ಕೂ ನಾವು ದಿನನಿತ್ಯ ಬಳಸುತ್ತಿರುವ ಮಾತುಗಳಲ್ಲಿ ನಾವು ನೀವು ಇದುವರೆಗೆ ಕೇಳಿರದ ಮಾತುಗಳೇ ಹೇಳಿರುವ ಮಾತನ್ನೇ ಇಂದೂ ಹೇಳುವರು ಹೊಸ ಪದಗಳನ್ನು ಹೇಳಲಾರರು. ವ್ಯಾಕರಣ ನಿಯಮಗಳ ಮೂಲಕ ನಮ್ಮ ನುಡಿ ಪಡೆಯುವ ಕಸುವು ನಿಜಕ್ಕೂ ಬಹಳ ದೊಡ್ಡದು ಮತ್ತು ಅಮೂಲ್ಯವಾದದ್ದು.

ಮಾನವನನ್ನು ಬಿಟ್ಟು ಇತರ ಪ್ರಾಣಿಗಳು ಬಳಸುವ ಮಾತು ಇಲ್ಲವೇ ಧ್ವನಿಗಳು ಸೀಮಿತವಾದವು. ನಾವು ನಮ್ಮ ನುಡಿಗಳಲ್ಲಿ ಬಳಸುವ ವ್ಯಾಕರಣ ನಿಯಮಗಳು ಸೃಷ್ಟಿಸಿರುವ ನಿಯಮಗಳು ಅವುಗಳ ಹಿಂದೆ ಇರುವುದಿಲ್ಲ. ಹಾಗಾಗಿ ಅವು ತಮಗೆ ಬೇಕಾದಾಗ ಹೊಸ ಹೊಸ ಧ್ವನಿಗಳನ್ನು ಉಂಟು ಮಾಡಲಾರವು. ಹುಟ್ಟಿನಿಂದ ಬಂದಿರುವ ಕೆಲವೇ ಕೆಲವು ಧ್ವನಿಗಳನ್ನು ಮಾತ್ರ ಕೆಲವು ಸನ್ನಿವೇಶಗಳಲ್ಲಿ ಮಾತ್ರ ಬಳಸುತ್ತೇವೆ.

ಮಾತನ್ನು ಬಳಸಲು ನಮಗೆ ಹೊರಗಿನ ಉತ್ತೇಜನ ಬೇಕಾಗಿಲ್ಲ. ಮಾನವನು ಇದನ್ನು ತನಗೆ ಬೇಕಾದಾಗ ಸ್ವಾತಂತ್ರ್ಯವಾಗಿ ಬಳಸುವುದನ್ನು ಕಲಿತಿರುತ್ತಾನೆ. ಮಾನವನು ತನ್ನಕಲ್ಪನಾ ಶಕ್ತಿಯ ಮೂಲಕ ಎಲ್ಲವನ್ನುಸೃಷ್ಟಿಸಿ ಎಲ್ಲರಿಗೂ ವಿವರಿಸಬಲ್ಲ ಕೌಶಲ್ಯವನ್ನು ಹೊಂದಿರುತ್ತಾನೆ.

ಉಲಿಗಳು ಅಂಗಾಂಗಗಳ ಆಧಾರದ ಮೇಲೆ ಹಲವು ಮಾರ್ಪಾಡಿಗೆ ಒಳಗಾಗುತ್ತದೆ. ಉಸಿರನ್ನು ಬಳಸಿ ಉಸಿರನ್ನು ತಡೆ ಹಿಡಿಯುವುದರ ಮೂಲಕ ನಮ್ಮ ಧ್ವನ್ಯಾಂಗಗಳನ್ನು ಬಳಸಿ ಧ್ವನಿಯನ್ನು ಉಚ್ಚರಿಸಿತ್ತೇವೆ. ಹೊರ ಹೋಗುವ ಉಸಿರಿಗೆ ಬೇರೆ ಬೇರೆ ಕಡೆಗಳಲ್ಲಿ ತಡೆಗಳನ್ನೊಡ್ಡುವ ಮೂಲಕ ಉಲಿಗಳನ್ನು ಹೊರಡಿಸುತ್ತೇವೆ.

ಇದನ್ನು ತಡೆಯುಲಿಗಳೆಂದು ಕರೆಯಬಹುದು. ಉಸಿರಾಡುವುದಕ್ಕೆ ಮತ್ತು ಆಹಾರ ಸೇವನೆಗಾಗಿ ಇರುವ ಅಂಗಗಳನ್ನೇ ಭಾಷೆಯನ್ನಾಡುವುದಕ್ಕೆ ಮಾನವರು ಬಳಸಿಕೊಳ್ಳುತ್ತಾರೆ. ಈ ಅಂಗಗಳಿಂದ ಭಾಷೆಯನ್ನು ಉಪ ಉತ್ಪನ್ನವಾಗಿ ಮಾನವರು ಉತ್ಪಾದಿಸುತ್ತಾರೆ.

ಭಾಷೆಯಲ್ಲಿನ ಮಾತಿನ ಧ್ವನಿಗಳೆಲ್ಲವೂ ನಾವು ಹೊರ ಬಿಡುವ ಉಸಿರಿನ ಗಾಳಿಯನ್ನು ಉಪಯೋಗಿಸಿಕೊಂಡು ಹುಟ್ಟುತ್ತವೆ. ಶ್ವಾಸಕೋಶದ ಮೂಲಕ ಮನುಷ್ಯರು ಹುಟ್ಟಿನಿಂದ ಸಾವಿನ ತನಕ ನಿರಂತರವಾಗಿ ಉಸಿರಾಡುತ್ತಿರುತ್ತಾರೆ ಇಂತಹ ಶ್ವಾಸನಾಳದ ಮೇಲ್ಭಾಗದಲ್ಲಿ ಇರುವಧ್ವನಿಪೆಟ್ಟಿಗೆಯೊಳಗೆ ಎರಡು ಘೋಷ ತಂತುಗಳಿವೆ. ಮೇಲ್ಮುಖವಾಗಿ ಹೊರ ಬರುವ ಉಸಿರಾಟದ ಗಾಳಿಯೂ ಕಂಠದ ಮೇಲ್ಭಾಗದಲ್ಲಿರುವ ಧ್ವನಿಪೆಟ್ಟಿಗೆಯ ಮೂಲಕ ಹಾದು ಮೇಲಕ್ಕೆ ಬರುತ್ತದೆ. ಭಾಷೆಯಲ್ಲಿ ಬಳಕೆಯಾಗುವ ಧ್ವನಿಗಳೆಲ್ಲವೂ ಧ್ವನಿ ಪೆಟ್ಟಿಗೆಯಿಂದ ತುಟಿಗಳ ಹೊರಗೆ ಇರುವಜಾಗದಲ್ಲಿ ಅಂದರೆ ಬಾಯಿಯ ಬೇರೆ ಬೇರೆ ಭಾಗಗಳ ಮತು ಮೂಗಿನ ದ್ವಾರದ ಸಹಾಯದಿಂದ ಹುಟ್ಟುತ್ತವೆ. ಮಾತಿನ ಧ್ವನಿಗಳ ಉಚ್ಚಾರಣೆಗೆ ನೆರವಾಗುವ ಅಂಗಗಳನ್ನು ಧ್ವನ್ಯಾಂಗಗಳೆಂದು ಕರೆಯುತ್ತಾರೆ.

ಧ್ವನಿಗಳು ಉತ್ಪತ್ತಿಯಾಗುವರೀತಿಯನ್ನು ನಾವು ಕನ್ನಡ ಭಾಷೆಯಧ್ವನಿಮಾಗಳು ಉತ್ಪತ್ತಿಯಾಗುವ ವಿಧಾನವನ್ನು ತಿಳಿಯುವುದರ ಮೂಲಕ ವಿಶ್ಲೇಷಣೆ ಮಾಡಬಹುದು. ಯಾವುದೇಅಡೆತಡೆಯಿಲ್ಲದೇಉಚ್ಚರಿಸುವ ಮಾತಿನ ಧ್ವನಿಗಳು ಅಂದರೆಧ್ವನಿ ಪೆಟ್ಟಿಗೆಯಿಂದ ಮೇಲ್ಮುಖವಾಗಿಹೊರ ಬರುತ್ತಿರುವ ಉಸಿರನ್ನು ಎಲ್ಲಿಯೂ ನಿಲ್ಲಿಸದೆ ಉಸಿರಿನ ಮಾರ್ಗವನ್ನು ಎಲ್ಲಿಯೂ ಕಿರಿದುಗೊಳಿಸಿ ಅಡಚಣೆಯನ್ನು ಉಂಟು ಮಾಡದೆಉಚ್ಚರಿಸುವ ಮಾತಿನ ಧ್ವನಿಗಳು ಸ್ವರಗಳಾಗಿ ಹುಟ್ಟುತ್ತದೆ.

ಬಾಯಿಯಆಕಾರವನ್ನು ವಿವಿಧ ರೀತಿಗಳಲ್ಲಿ ಬದಲಾಯಿಸುವುದರ ಮೂಲಕ ಕನ್ನಡ ಭಾಷೆಯ ೧೦ ಸ್ವರಗಳನ್ನು ಉಚ್ಚರಿಸಲಾಗುತ್ತದೆ ಸ್ವರಗಳ ಉತ್ಪತ್ತಿಯಲ್ಲಿ ಧ್ವನ್ಯಾಂಗಗಳು ತುಟಿಗಳೆರಡನ್ನು ಅಗಲಿಸಿ ಸ್ವಲ್ಪ ಹಿಂದಕ್ಕೆ ಚಲಿಸುವಂತೆ ಮಾಡುವುದು. ಆಗ **ಇ,ಈ,ಉ,ಊ** ಸ್ವರಗಳ ಉಚ್ಚರಣೆಯಾಗುತ್ತದೆ ನಾಲಿಗೆಯ ಭಾಗಗಳನ್ನು ಮೇಲಕ್ಕೆ ಕೆಳಕ್ಕೆ ಚಲಿಸುತ್ತಿರುವಇದರಿಂದ ಬಾಯಿಯೊಳಗೆ ಮಾತಿನ ಧ್ವನಿಗಳ ಉಚ್ಚಾರಣೆಯ ಕಾಲ ಹಿಗ್ಗುತ್ತದೆಅಥವಾಕುಗ್ಗುತ್ತದೆ.

ಉಚ್ಚರಣೆಯ ಕಾಲದಲ್ಲಿ ಹೆಚ್ಚು ಕಡಿಮೆಯಾಗುವುದರಿಂದ ಸ್ವರಗಳ ಲಕ್ಷಣಗಳು ಬದಲಾಗುತ್ತದೆ. ಕನ್ನಡ ಭಾಷೆಯಲ್ಲಿ ಬಳಕೆಯಾಗುತ್ತಿರುವ ೩೪ ಧ್ವನಿಗಳನ್ನು ವ್ಯಂಜನ ಧ್ವನಿಗಳೆಂದು ಗುರುತಿಸಲಾಗಿದೆ. ಉಚ್ಚಾರಣೆಯ ಸಂದರ್ಭದಲ್ಲಿ ಧ್ವನಿ ಪೆಟ್ಟಿಗೆಯಿಂದ ಮೇಲ್ಮುಖವಾಗಿ ಬರುತ್ತಿರುವಗಾಳಿಯ ಪ್ರವಾಹಕ್ಕೆ ಧ್ವನ್ಯಾಂಗಗಳಲ್ಲಿ ಒಂದಲ್ಲಾ ಒಂದುಕಡೆ ಒಂದಲ್ಲಾ ಒಂದುರೀತಿಯಲ್ಲಿತಡೆಯುಂಟಾಗಿ ಹುಟ್ಟಿ ಬರುವ ಅಥವಾಉಚ್ಚರಣೆಗೊಳ್ಳವು ಮಾತಿನ ಧ್ವನಿಗಳನ್ನು ವ್ಯಂಜನವೆಂದು ಹೇಳುವರು. ಶ್ವಾಸಕೋಸದಿಂದ ಹೊರ ಬರುತ್ತಿರುವ ಉಸಿರನ್ನು ಧ್ವನಿ ಪೆಟ್ಟಿಗೆಯಲ್ಲಿರುವ ಘೋಷ ತಂತುಗಳಿಂದ ತುಟಿಯವರೆಗಿನಜಾಗದ ನಡುವೆಯಾವುದಾದರೊಂದು ಸ್ಥಾನದಲ್ಲಿ ಯಾವುದಾದರೊಂದು ಬಗೆಯಲ್ಲಿ ಅಡ್ಡಿಪಡಿಸುವ ವಿಧಾನವೇ ಪ್ರಯತ್ನಅಂದರೆ ಉಸಿರನ್ನು ತಡೆದು ನಿಲ್ಲಿಸಿ ಮತ್ತೆ ಬಿಡುವುದು.

**ಎತ್ತುಗೆಗಾಗಿ:-** ಶ್ವಾಸಕೋಶದಿಂದಧ್ವನಿಪೆಟ್ಟಿಗೆಯ ಮೂಲಕ ಹೊರಬರುತ್ತಿರುವ ಉಸಿರನ್ನು ಎರಡು ತುಟಿಗಳ ನೆರವಿನಿಂದಕ್ಷಣಕಾಲ ಸಂಪೂರ್ಣವಾಗಿ ನಿಲ್ಲಿಸಿದಾಗ **"ಪ"** ವರ್ಗದ ಧ್ವನಿಗಳ ಉಚ್ಚಾರಣೆಯರೀತಿ**ಪ್,ಫ್, ಬ್, ಭ್, ಮ್** .

ಹೀಗೆ ನಾನಾ ರೀತಿಯ ಪ್ರಯತ್ನಗಳಿಂದ ಅಂದರೆ ಉಸಿರಿನ ಅಡೆತಡೆಗಳಿಂದ ವ್ಯಂಜನಧ್ವನಿಗಳು ಉತ್ಪತ್ತಿಯಾಗುತ್ತವೆ. ವರ್ಗೀಯ ವ್ಯಂಜನದ ಅಂತ್ಯಕ್ಷರಗಳನ್ನು ಉಚ್ಚರಿಸುವಾಗಧ್ವನಿಪೆಟ್ಟಿಗೆಯ ಘೋಷ ತಂತುಗಳಿಂದ ಹೊರ ಬಂದು ಗಾಳಿಯೂ ಮೂಗಿನ ಮೂಲಕವಾಗಿಯೇ ಹೊರಕ್ಕೆ ಬರುತ್ತದೆ. ಈ ಐದು ವ್ಯಂಜನ ಧ್ವನಿಗಳನ್ನು ಅನುನಾಸಿಕಗಳೆಂದುಕರೆಯುವವರು.

ಅವರ್ಗೀಯ ವ್ಯಂಜನಗಳ ಉತ್ಪತ್ತಿ ಸ್ಥಾನಗಳೂ ಅಂದರೆ ಹಲ್ಲುಗಳ ಮೇಲಿನ ನಾಲಿಗೆ ನಾಲಿಗೆಯು ಬಡಿಯುವುದರಿಂದ,**ಯ, ರ**,ಧ್ವನಿಗಳು ಹಾಗೂ ದಂತ ಮೂಲಿಯ ಧ್ವನಿಗಳಾದ**ಲ,ಳ** ಪಕ್ಕದಲ್ಲಿ ಉಸಿರು ಹೊರ ಹೊಮ್ಮುವುದರಿಂದ ಹುಟ್ಟುತ್ತದೆ. **'ವ'** ತುಟಿಗಳ ಚಲನೆ **ಶ, ಷ**,ನಾಲಿಗೆಯ ಫಲಕವು ತಾಕುವುದರಿಂದ ಉಂಟಾಗುವಧ್ವನಿ **ಸ** ದಂತ ಮೂಲಿಯಾ ಧ್ವನಿಹಲ್ಲುಗಳ ಸಂಧಿಯಲ್ಲಿ ಗಾಳಿಹೊಮ್ಮಿದಾಗ ಹುಟ್ಟವಧ್ವನಿಹಾಗೆಯೇ **ಹ** ಕಾರವು ನಾಲಿಗೆಯ ಬುಡದಿಂದ ಹುಟ್ಟುವಧ್ವನಿಯಾಗಿದೆ

ವ್ಯಾಕರಣಕಾರರು ಧ್ವನಿಮಾಗಳನ್ನು ಉಚ್ಚಾರಣೆಯರೀತಿಯನ್ನು ವಿಶ್ಲೇಷಣೆ ಮಾಡಿ ಸ್ವರ, ವ್ಯಂಜನಗಳೆಂದು ವಿಂಗಡಿಸಿದ್ದಾರೆ. ಭಾಷಾವಿಜ್ಞಾನಿಗಳು

ಧ್ವನಿಪೆಟ್ಟಿಗೆಯಲ್ಲಿರುವ ಘೋಷ ತಂತುಗಳ ಕಂಪನದಆಧಾರದ ಮೇಲೆ ಧ್ವನಿಮಾಗಳನ್ನು ಘೋಷಧ್ವನಿ ಮತ್ತು ಅಘೋಷಧ್ವನಿ ಎಂದು ವಿಭಾಗಿಸಿದ್ದಾರೆ. ಧ್ವನಿಪೆಟ್ಟಿಗೆಯಲ್ಲಿರುವ ಘೋಷ ಕಂಪನದಿಂದಉಂಟಾದ ನಾದದಿಂದಕೂಡಿದ ಗಾಳಿಯನ್ನು ಬಾಯಿಯ ವಿವಿಧ ಜಾಗದಲ್ಲಿ ಬೇರೆ-ಬೇರೆ ಆಕಾರಕ್ಕೆ ತಿರುಗಿಸಿ ಅಥವಾ ಗಾಳಿಯನ್ನು ತಡೆದುಉಚ್ಚರಿಸುವಧ್ವನಿಗಳನ್ನು ಘೋಷಧ್ವನಿಗಳೆಂದು ಹೇಳುವರು ಎಲ್ಲಾ ಸ್ವರಗಳು ಮಹಾಪ್ರಾಣಗಳು ಅನುನಾಸಿಕಗಳು ಎಲ್ಲವೂ ಸೇರಿರುತ್ತದೆ.

ಹಾಗೆಯೇ ಧ್ವನಿಪೆಟ್ಟಿಗೆಯಲ್ಲಿರುವ ಘೋಷ ತಂತುಗಳ ಕಂಪನವಿಲ್ಲದೆ ಮೇಲ್ಮುಖವಾಗಿ ಹೊರ ಬರುವ ಗಾಳಿಯನ್ನು ಉಪಯೋಗಿಸಿಕೊಂಡು ಹುಟ್ಟುವ 'ಧ್ವನಿಗಳನ್ನು ಅಘೋಷ ಧ್ವನಿಗಳೆಂದು ಕರೆಯುತ್ತಾರೆ. ಎಲ್ಲಾ ಅಲ್ಪಪ್ರಾಣಗಳು ಇದಕ್ಕೆ ಸೇರಿರುತ್ತದೆ. ಜಗತ್ತಿನಎಲ್ಲಾ ಭಾಷೆಗಳ ಧ್ವನಿ ವ್ಯವಸ್ಥೆಯಲ್ಲಿ ಅಘೋಷ ಧ್ವನಿಗಳಿಗಿಂತ ಕನ್ನಡ ವಾಕ್ಯಗಳಲ್ಲಿ ಮುಖ್ಯವಾಗಿ ಎರಡು ರೀತಿಯ ಪದಗಳು ರೂಢಿಯಲ್ಲಿದೆ. ಒಳರಚನೆ ಇರುವ ಪದಗಳು ಒಳರಚನೆಯಿಲ್ಲದ ಪದಗಳು ಪದಗಳ ರಚನೆಯು ಮುಖ್ಯವಾಗಿಚರಿತ್ರೆಯನ್ನು ಹೊಂದಿರುತ್ತದೆ. ಒಂದುಅಥವಾ ಹೆಚ್ಚು ಪದಗಳನ್ನು ಬಲ್ಲವರುಒಂದು ವಸ್ತು ಅಥವಾ ಸನ್ನಿವೇಶಗಳಿಗೆ ಒಂದಕ್ಕಿಂತ ಹೆಚ್ಚು ಪದಗಳನ್ನು ಬಳಸಿ ಅವುಗಳು ಕ್ರಮೇಣ ರೂಢಿಯಿಂದ ಉಳಿದ ಭಾಷೆಯಲ್ಲಿ ಸೇರಿ ಕೆಲವು ಬದಲಾವಣೆಗಳಿಗೆ ಒಳಗಾಗಿರುತ್ತದೆ.

ಒಳರಚನೆಯಿರುವ ಪದಗಳನ್ನು ವಾಕ್ಯಗೆಳಲ್ಲಿ ನಾವು ಬಳಸುವಾಗ ಅದರ ಒಳರಚನೆ ಏನು ಎಂದೂ ತಿಳಿದಿರಬೇಕೆಂಬ ಕಡ್ಡಾಯವಿಲ್ಲ. ವಾಕ್ಯದಲ್ಲಿ ಬಳಕೆಯಾಗುತ್ತಿರುವ ಪದಗಳ ಅರ್ಥವೇನು? ಅದನ್ನು ಎಲ್ಲಿ ಹೇಗೆ, ಯಾವಾಗ ಬಳಸಬೇಕೆಂಬ ತಿಳುವಳಿಕೆ ಇದ್ದರೆ ಸಾಕು ಎಂದು ಡಿ.ಎನ್.ಶಂಕರಭಟ್ಟರು ಹೇಳುತ್ತಾರೆ. ಪದದಅರ್ಥವನ್ನು ಒಳ ರಚನೆಯಆಧಾರದ ಮೇಲೆ ಮಾತ್ರವೇ ನಿರ್ಧರಿಸಲು ಸಾಧ್ಯವೆಂಬ ಆಲೋಚನೆಯನ್ನುಮುಂದಿಟ್ಟಿದ್ದಾರೆ.

ಚಿಂಗಣ್ಣನವರ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹೀಗೆ ನಾಮಪದಗಳ ಅರ್ಥವನ್ನು ಮತ್ತು ವಾಕ್ಯಗಳಲ್ಲಿ ನಾವು ಅದನ್ನು ಉಪಯೋಗಿಸುವರೀತಿಯೂ ಒಳರಚನೆಯ ಸಹಾಯದಿಂದ ಊಹಿಸಿಕೊಳ್ಳಬಹುದು ಸಾಮಾನ್ಯವಾಗಿ ಭಾಷೆಯಲ್ಲಿ ಬರುವ ಎಲ್ಲಾ ಪದಗಳು ಎಲ್ಲರೂ ನೆನಪಿನಲ್ಲಿ ಇಟ್ಟುಕೊಂಡಿರುವುದಿಲ್ಲ. ನೆನಪಿನಲ್ಲಿ ಉಳಿದಿದ್ದರೂ ವೈಯಕ್ತಿಕವಾಗಿ ಒಂದೊಂದು ಬಗೆಯ ಅರ್ಥವನ್ನು ನೀಡುವ ಪದಗಳಾಗಿರುತ್ತದೆ. ಭಾಷೆಯಲ್ಲಿ ಕಾಣಿಸುವ ಒಳರಚನೆಯಿರುವ ಪದಗಳು ಬೇರೆ ಬೇರೆ ಸನ್ನಿವೇಶದಲ್ಲಿ ರಚನೆಗೊಂಡು ಬಳಕೆಯ ಮೂಲಕ ರೂಢಿಗೆ ಬಂದಿರುತ್ತದೆ.

ಸಾಮಾನ್ಯವಾಗಿ ಒಂದೇ ಆಗಿರುತ್ತದೆ. ಕ್ರಮೇಣ ಪದಗಳ ಬಳಕೆ ಇದೆ ಹಾಗೂ ಚರಿತ್ರೆಗೂ ಕೆಲವು ವ್ಯತ್ಯಾಸಗಳು ಮೂಡಿ ಬರಬಹುದು. ಒಳರಚನೆಯಿಂದ ಪದಗಳಿಗೆ ಭಾಷೆಯಲ್ಲಿ ಯಾವ ಸ್ಥಾನವಿದೆ ಹಾಗೂ ಇತರ ಪದಗಳಿಗೆ ಸಂಬಂಧದ ಮೇಲು ಅವಲಂಭಿಸಿರುವ ಸಾಧ್ಯವಿದೆ. ಒಂದು ಭಾಷಿಕ ಸಮುದಾಯದಲ್ಲಿ ಬಳಕೆಯಲ್ಲಿರುವ ಪದಗಳು ಕಾಲದಿಂದ ಕಾಲಕ್ಕೆ ಬದಲಾವಣೆಗಳಿಗೆ ಒಳಗಾಗುತ್ತಿರುತ್ತವೆ. ಪದಗಳ ಒಳರಚನೆಯಲ್ಲಿ ಬಳಕೆಯಾದ ಪದಗಳು ಸಂಕ್ಷಿಪ್ತಗೊಂಡು ಪ್ರತ್ಯಯರೂಪವನ್ನು ಪಡೆದಿರುವ ಸಾಧ್ಯತೆಗಳೂ ಇವೆ.

131645

ಕನ್ನಡದಲ್ಲಿ ಬರುವ ಪದಗಳ ಇತಿಹಾಸವನ್ನು ನಾವು ತಿಳಿಯಲು ಅದನ್ನು ಹಳಗನ್ನಡ, ನಡುಗನ್ನಡ, ಮತ್ತುಕನ್ನಡದ ಬೇರೆ ಬೇರೆಆಧುನಿಕ ಪ್ರಭೇದಗಳಲ್ಲಿ ಹೇಗೆ ಉಪಯೋಗಿಸಲಾಗುತ್ತದೆ ಎಂಬುದನ್ನು ಮತ್ತು ಸಹೋದರ ಭಾಷೆಗಳಾದ ತಮಿಳು, ಮಲಯಾಳಂ, ತೆಲುಗು, ತುಳು, ಗೊಂಡಿ, ಕುರುಖ್, ಮೊದಲಾದ ದ್ರಾವಿಡ ಭಾಷೆಗಳಲ್ಲಿ ಇರುವ ಸ್ವರೂಪ ಹಾಗೂ ಲಕ್ಷಣಗಳನ್ನು ತಿಳಿಯುವುದು ಅವಶ್ಯಕ. ಸಂಸ್ಕೃತ ವ್ಯಾಕರಣದಲ್ಲಿ ಪದ ಮತ್ತು ಶಬ್ದವನ್ನು ಒಂದೇ ಅರ್ಥದಲ್ಲಿ ಕೆಲವೊಮ್ಮೆ ಬಳಸುವ ಕ್ರಮವಿದೆ ಈ ಬಳಕೆಯ ಆಧಾರವನ್ನು ಅನುಸರಿಸಿ ಕನ್ನಡ ವ್ಯಾಕರಣಗಳಲ್ಲೂ ಪದ ಮತ್ತು ಶಬ್ದ ಎಂಬ ಎರಡು ಶಬ್ದಗಳು ಬಳಕೆಗೆ ಬಂದಿವೆ ಸಂಸ್ಕೃತದಲ್ಲಿ ಪದ ಎಂಬುದಕ್ಕೆ ಹೆಚ್ಚಿನ ಸನ್ನಿವೇಶಗಳಲ್ಲಿ ಶಬ್ದ ಎಂಬುದರ ಅರ್ಥವೇ ಇದೆ. ಆದರೆ ಕೆಲವು ಸನ್ನಿವೇಶಗಳಲ್ಲಿ ಮಾತ್ರ ಕೆಲವು ವಿಶಿಷ್ಟವಾದ ಪ್ರತ್ಯಯಗಳೊಂದಿಗೆ ಬರುವ ಶಬ್ದ ಎಂಬ ಪ್ರತ್ಯೇಕವಾದ ಅರ್ಥವಿದೆ ಎಂದು ಡಿ.ಎನ್. ಶಂಕರಭಟ್ಟರು ಹೇಳುತ್ತಾರೆ.

ಬೇರೆ ಬೇರೆ ಪ್ರತ್ಯಯಗಳೊಂದಿಗೆ ಬಂದಿರುವ ಪದಗಳನ್ನು ಪದರೂಪ ಎಂದು ಕರೆಯುವ ಕಾರಣ ವಿಶಿಷ್ಟವಾದ ಅರ್ಥವನ್ನು ಸೂಚಿಸಲು ಪದ ಮತ್ತು ಶಬ್ದ ಎಂಬ ಎರಡು ಬೇರೆ ಬೇರೆ ಪಾರಿಭಾಷಿಕ ಪದಗಳನ್ನು ಬಳಸುವ ಅಗತ್ಯವಿಲ್ಲ. ಆದ್ದರಿಂದ ಡಿ.ಎನ್. ಶಂಕರಭಟ್ಟರು ತಮ್ಮ ಕೃತಿಗಳಲ್ಲಿ ಹೆಚ್ಚಾಗಿ ಪದವೆಂದೇ ಬಳಸಿದ್ದಾರೆ. ಅರ್ಥಗಳು ಬೇರೆ ಬೇರೆ ಇದ್ದು ರೂಪ ಒಂದೇ ಇರುವ ಪದಗಳು ಕನ್ನಡದಲ್ಲಿದೆ.
**ಉದಾಹರಣೆ :** ಕರೆ ಎಂಬ ಒಂದೇ ರೂಪದಲ್ಲಿ ಹಾಲನ್ನು ಕರೆ ಮತ್ತು ರಾಜುವನ್ನು ಕರೆ ಎಂಬ ಪ್ರಯೋಗಗಳನ್ನು ಗಮನಿಸಿದಾಗ ಪದದ ಅರ್ಥ ಬೇರೆ ರೂಪವು ಒಂದೇ ಆಗಿರುವುದನ್ನು ಗಮನಿಸಬಹುದು. ಧಾತು ಎಂಬ ಇನ್ನೊಂದು ಪದವೂ ವ್ಯಾಕರಣಗಳಲ್ಲಿ ಪದಗಳನ್ನು ಹೆಸರಿಸಲು ಉಪಯೋಗಿಸುತ್ತಾರೆ. ಒಳರಚನೆ ಇರುವ ಪದಗಳನ್ನು ಒಳರಚನೆ ಇಲ್ಲದಪದಗಳನ್ನು ಬೇರ್ಪಡಿಸಲು ಧಾತು ಎಂಬ ಪಾರಿಭಾಷಿಕ ಪದವನ್ನು ಬಳಸಬಹುದು ಸಂಸ್ಕೃತದಲ್ಲಿ ಹೆಚ್ಚು ಪದಗಳೂ ಕ್ರಿಯಾಪದಗಳಿಗೆ ಬೇರೆ ಬೇರೆ ಪ್ರತ್ಯಯಗಳನ್ನು ಸೇರಿಸುವುದರ ಮೂಲಕ ತಯಾರಾಗುವ ಕಾರಣ ಸಂಸ್ಕೃತದಲ್ಲಿ ಒಳರಚನೆಯಿಲ್ಲದೆ ಪದಗಳೆಲ್ಲವೂ ಕ್ರಿಯಾಪದಗಳೇ ಆಗಿರುತ್ತದೆ.

ಇದಲ್ಲದೆ ಸಂಸ್ಕೃತದಲ್ಲಿ ಧಾತುಗಳನ್ನು ಹಾಗೆಯೇ ವಾಕ್ಯಗಳಲ್ಲಿ ಬಳಸಲು ಬರುವುದಿಲ್ಲ ಇವುಗಳಿಗೆ ಬೇರೆ ಪ್ರತ್ಯಯಗಳನ್ನು ಸೇರಿಸುವ ಅವಶ್ಯಕತೆ ಇದೆ. ಆದ್ದರಿಂದ ಸಂಸ್ಕೃತದಲ್ಲಿ ಬಳಸುವ ವ್ಯಾಕರಣದಲ್ಲಿ ಕ್ರಿಯಾಧಾತುಗಳನ್ನು ಕ್ರಿಯಾಪದಕ್ಕಿಂತ ಭಿನ್ನವಾದುವೆಂದು ತಿಳಿಯುವುದು ಅವಶ್ಯಕವೆನಿಸುತ್ತದೆ ಆದರೆ ಕನ್ನಡದಲ್ಲಿ ಕ್ರಿಯಾಧಾತು ನಾಮಧಾತು, ಗುಣಧಾತುಗಳನ್ನು ಇವುಗಳಿಗೆ ಯಾವುದೇ ಪ್ರತ್ಯಯವನ್ನು ಸೇರಿಸದೆ ಹಾಗೆಯೇ ಬಳಸಬಹುದು.

ಒಳರಚನೆಯಿಲ್ಲದ ನಾಮಪದ, ಕ್ರಿಯಾಪದ, ಗುಣಪದಗಳಿಗೂ ನಾಮಧಾತು, ಕ್ರಿಯಾಧಾತು, ಗುಣಧಾತುಗಳಿಗೂ ನಡುವೆ ಕನ್ನಡದಲ್ಲಿ ಯಾವ ವ್ಯತ್ಯಾಸವಿಲ್ಲ ಆದ್ದರಿಂದ ನಮ್ಮ ಕನ್ನಡ ವ್ಯಾಕರಣದಲ್ಲಿ ಧಾತು ಎಂಬ ಪಾರಿಭಾಷಿಕ ಪದವನ್ನು ಬಳಸದಿರಲೂ ಸಾಧ್ಯವಿದೆ ಪದಗಳ ಅರ್ಥವನ್ನು ತಿಳಿದುಕೊಳ್ಳುವಲ್ಲಿ ಒಳರಚನೆಯ ಪಾತ್ರವೆಂತಹುದು ಎಂಬ ವಿಷಯದಲ್ಲಿ ನಾಮಪದಗಳಿಗೂ ಇತರ ಪದಗಳಿಗೂ ನಡುವೆ ಮುಖ್ಯವಾದ ವ್ಯತ್ಯಾಸವಿದೆ ಎಂಬುದನ್ನು ನಾವು ಗಮನಿಸಬೇಕಾಗುತ್ತದೆ. ನಾಮಪದಗಳಿಗೂ ಮತ್ತು ಇತರ ಪದಗಳಿಗೂ ವ್ಯತ್ಯಾಸವಿರಲು ಕಾರಣ ಹೆಸರಿಸುವುದು ಮತ್ತು ವರ್ಣಿಸುವುದು

ಎಂಬ ಎರಡು ವಿಧವಾದ ಗುರುತಿಸುವ ವಿಧಾನಗಳು ನಾಮಪದದ ಬಳಕೆಯಲ್ಲಿ ಮಾತ್ರ ಕಾಣಿಸಿಕೊಳ್ಳುತ್ತದೆ. ಆದರೆ ಕ್ರಿಯಾಪದ ಇಲ್ಲವೇ ಗುಣಪದಗಳಲ್ಲಿ ಬಳಕೆಯಲ್ಲಿ ಗೋಚರಿಸುವುದಿಲ್ಲ, ಕನ್ನಡದಲ್ಲಿ ಬಳಕೆಯಲ್ಲಿರುವ ಪದಗಳ ಒಳರಚನೆಯನ್ನು ಕನ್ನಡದವೇ ಆದ ವ್ಯಾಕರಣ ನಿಯಮಗಳ ಮೂಲಕ ವಿವರಿಸಿ ಹೇಳುವುದೇ ಡಿ.ಎನ್. ಶಂಕರಭಟ್ಟರ ಮೂಲ ಉದ್ದೇಶವಾಗಿದೆ.

ಕನ್ನಡಕ್ಕೆ ಮೂಲವಾಗಿರುವ ಭಾಷೆಯೊಂದರಿಂದ ಬಂದಿರುವ ಪದಗಳು ಹಾಗೂ ಬೇರೆ ಭಾಷೆಗಳಿಂದ ಎರವಲಾಗಿ ಬಂದಿದ್ದರೂ ಬೇರೆ ಬೇರೆ ಬದಲಾವಣೆಗಳ ಮೂಲಕ ಕನ್ನಡದವೇ ಆಗಿರುವ ಪದಗಳಲ್ಲಿ ಕಾಣಬಹುದು. ಕನ್ನಡದಲ್ಲಿ ಬರುವ ಇಂತಹ ಪದಗಳ ಒಳರಚನೆಯನ್ನೆಂಬುದನ್ನು ತಿಳಿದುಕೊಳ್ಳಲು ಪದ ವರ್ಗಗಳಾಗಿ ವಿಂಗಡಿಸಿಕೊಳ್ಳುವುದು ಅಗತ್ಯವಾಗಿದೆ. ಕ್ರಿಯಾಪದ ಮತ್ತು ಗುಣಪದಗಳ ಒಳರಚನೆಯಲ್ಲಿ ಅಷ್ಟೊಂದು ವೈವಿಧ್ಯತೆಯಿಲ್ಲ. ಅವುಗಳನ್ನು ಬಳಸುವ ಸಂಖ್ಯೆಯೂ ನಾಮ ಪದಗಳಕ್ಕಿಂತ ಕಡಿಮೆ ಇರುವುದನ್ನು ಕಾಣಬಹುದು.

ಪದಗಳ ಒಳರಚನೆಯೆಂಬುದು ಅವುಗಳ ವಿಭಾಗದ ಮೇಲೂ ಅವಲಂಬಿತವಾಗಿರುತ್ತದೆ ಅಂದರೆ ವಾಕ್ಯದಲ್ಲಿ ಬೇರೆ ಬೇರೆ ರೀತಿಯ ಕೆಲಸಗಳನ್ನು ನಡೆಸುವುದಕ್ಕಾಗಿ ಪದಗಳಿಗೆ ಬೇರೆ ಬೇರೆ ಒಳರಚನೆ ಇರಬೇಕಾಗುತ್ತದೆ ಭಾರತದಲ್ಲಿ ದ್ರಾವಿಡ, ಆರ್ಯ, ಟಿಬೆಟೋ-ಬರ್ಮನ್ ಮತ್ತು ಆಸ್ಟ್ರೋ-ಏಶಿಯಾಟಿಕ್ ಎಂಬುದಾಗಿ ನಾಲ್ಕು ಭಾಷಾವರ್ಗಗಳಿದ್ದು ಪ್ರತಿಯೊಂದು ಭಾಷಾ ವರ್ಗವೂ ತನ್ನದೇ ಆದ ವ್ಯಾಕರಣ ನಿಯಮಗಳನ್ನು ಒಳಗೊಂಡಿರುತ್ತದೆ ಅಲ್ಲದೇ ಭಾಷೆಗಳು ಬಳಸುವ ವಾಕ್ಯರಚನೆ ಹಾಗೂ ಅವುಗಳಲ್ಲಿ ಪದಗಳು ಮಾಡುವ ಕಾರ್ಯವೂ ಸಹ ವಿಭಿನ್ನವಾಗಿರುತ್ತದೆ.

ಹಾಗೆಯೇ ಕನ್ನಡ ಭಾಷೆಯೂ ದ್ರಾವಿಡ ಭಾಷಾವರ್ಗಕ್ಕೆ ಸೇರಿರುವ ಭಾಷೆಯಾಗಿದೆ ಅಂದರೆ ದ್ರಾವಿಡ ಭಾಷಾ ಕುಟುಂಬಕ್ಕೆ ಸೇರಿರುವ ಭಾಷೆಗಳಲ್ಲಿ ನಾಮಪದ, ಕ್ರಿಯಾಪದ ಮತ್ತು ಗುಣಪದಗಳೆಂಬ ಮೂರು ಮುಖ್ಯ ಪದವರ್ಗಗಳಿವೆ ಕನ್ನಡದಲ್ಲಿ ಮುಖ್ಯವಾಗಿ ಮೂರು ರೀತಿಯ ಪ್ರತ್ಯಯವಿರುವ ನಾಮಪದಗಳು ಬಳಕೆಯಲ್ಲಿವೆ. ನಾಮಪದ, ಕ್ರಿಯಾಪದ ಮತ್ತು ಗುಣಪದಗಳಿಗೆ ಹೆಚ್ಚು ಹೆಚ್ಚು ಪ್ರತ್ಯಯಗಳನ್ನು ಸೇರಿಸುವುದರ ಮೂಲಕ ಅರ್ಥ ಉಳ್ಳಪದವಾಗುತ್ತದೆ.

**ಉದಾ :-** ಗಾಣಿಗ ಎಂಬ ಪ್ರತ್ಯಯವಿರುವ ನಾಮಪದವು ಗಾಣ ಎಂಬ ನಾಮಪದಕ್ಕೆ ಇಗ ಎಂಬ ಪ್ರತ್ಯವನ್ನು ಸೇರಿಸುವುದರ ಮೂಲಕ ಪದವಾಗಿದೆ.

ಹೆಚ್ಚಾಗಿ ನಾಮಪದಗಳಲ್ಲಿ ಕ್ರಿಯಾಪದಗಳಿಗೆ ಪ್ರತ್ಯಯಗಳನ್ನು ಸೇರಿಸಿ ತಯಾರಾಗಿರುವ ನಾಮಪದಗಳೇ ಕನ್ನಡದಲ್ಲಿ ಅಧಿಕವಾಗಿದೆ ಪ್ರತ್ಯಯವಿರುವ ನಾಮಪದಗಳಲ್ಲಿ ಹೆಚ್ಚಿನವೂ ಒಂದು ಪದಕ್ಕೆ ಒಂದು ಪ್ರತ್ಯಯವಿರುವ ನಾಮಪದಗಳಲ್ಲಿ ಹೆಚ್ಚಿನವೂ ಒಂದು ಪದಕ್ಕೆ ಒಂದು ಪ್ರತ್ಯಯವನ್ನು ಮಾತ್ರ ಸೇರಿಸುವುದರ ಮೂಲಕ ತಯಾರಾಗಿದೆ ಒಂದಕ್ಕಿಂತ ಹೆಚ್ಚು ಪ್ರತ್ಯಯಗಳನ್ನು ಸೇರಿಸಿ ಆಗಿರುವ ನಾಮಪದಗಳ ಸಂಖ್ಯೆಯೂ ಕನ್ನಡದಲ್ಲಿ ಬಹಳ ಕಡಿಮೆ.

ಕನ್ನಡದಲ್ಲಿ ಬರುವ ಪ್ರತ್ಯಯಗಳೆಲ್ಲವೂ ಬೇರೆ ಪ್ರತ್ಯಯಗಳು ಅಂದರೆ ನಾಮಪದ, ಕ್ರಿಯಾಪದ, ಗುಣಪದಗಳ, ನಂತರ ಬರುತ್ತವೆ. ಪೂರ್ವ ಪ್ರತ್ಯಯಗಳು ಎಂದರೆ ಪದಗಳ ಮೊದಲು ಬರುವ ಪ್ರತ್ಯಯಗಳು ಕನ್ನಡದಲ್ಲಿ ಬೇರೆ ಭಾಷೆಯಿಂದ ಎರವಲಾಗಿ ಪಡೆದ ಪದಗಳಲ್ಲಿ ಮಾತ್ರ ಕಾಣಿಸುತ್ತದೆ.

**ಉದಾ:-** ವಿ-ಜ್ಞಾ-ನ, ಅ-ತೃಪ್ತಿ ಕನ್ನಡದ ನಾಮಪದಗಳಲ್ಲಿ ಬಳಸುವ ಪದಪ್ರತ್ಯಯಗಳು ಸಾಮಾನ್ಯವಾಗಿ ಕ್ರಿಯಾಪದಗಳಿಂದ ನಾಮಪದಗಳನ್ನು ತಯಾರಿಸಲು ಬಳಸಿದ ಪ್ರತ್ಯಯಗಳಾಗಿರುತ್ತದೆ.

ಗುಣಪದಗಳಿಂದ ಇಲ್ಲವೇ ನಾಮಪದಗಳಿಂದ ಬೇರೆ ನಾಮಪದಗಳನ್ನು ತಯಾರಿಸಲು ಬಳಸುವ ಪದ ಪ್ರತ್ಯಯಗಳ ಸಂಖ್ಯೆ ಕನ್ನಡದಲ್ಲಿ ಬಹಳ ಕಡಿಮೆ ಆದ್ದರಿಂದ ಹೆಚ್ಚಾಗಿ ಕ್ರಿಯಾಪದಗಳಿಂದ ತಯಾರಾದ ನಾಮಪದಗಳನ್ನು ಮುಖ್ಯವಾಗಿ ನಾವು ತಿಳಿದುಕೊಳ್ಳಬೇಕಾಗುತ್ತದೆ. ಜೋಡು ಪದಗಳು ಎರಡು ಅಥವಾ ಜಾಸ್ತಿ ಪದಗಳನ್ನು ಒಟ್ಟಾಗಿ ಜೋಡಿಸಿ ಒಂದೇ ಪದವಾಗಿ ಮಾಡುವ ವಿಧಾನ.

**ಉದಾ :** ಹೆಮ್ಮರ ಎಂಬುದು ಒಂದು ಜೋಡುಪದ ಯಾಕೆಂದರೆ ಇದರಲ್ಲಿ ಹಿರಿದಾದ ಮತ್ತು ಮರ ಎಂಬ ಎರಡು ಪದಗಳನ್ನು ಒಟ್ಟಾಗಿ ಜೋಡಿಸಿ ಬೇರೆಯೇ ಒಂದು ಪದವನ್ನು ತಯಾರಿಸಲಾಗಿದೆ ಜೋಡುಪದ ಮತ್ತು ಪದಗುಚ್ಛಗಳ ನಡುವಿರುವ ವ್ಯತ್ಯಾಸವೇನೆಂದು ತಿಳಿಯುವುದು ಕನ್ನಡ ಭಾಷೆಯ ಮಟ್ಟಿಗೆ ಒಂದು ಮುಖ್ಯವಾದ ಕೆಲಸವೆಂದು ಡಿ.ಎನ್. ಶಂಕರಭಟ್ಟರು ಹೇಳುತ್ತಾರೆ.

ಕನ್ನಡದ ಕ್ರಿಯಾಪದಗಳಲ್ಲಿ ಒಳರಚನೆ ಇರುವ ಹಾಗೂ ಒಳರಚನೆ ಇಲ್ಲದಿರುವ ಎರಡು ಗುಂಪುಗಳಾಗಿ ವಿಭಾಗಿಸಬಹುದು. ನಾಮಪಗಳಿಗೂ ಹಾಗೂ ಕ್ರಿಯಾ ಪದಗಳಿಗೂ ನಡುವೆ ಅವುಗಳ ಒಳರಚನೆಯಲ್ಲಿ ಕಾಣಿಸುವ ವ್ಯತ್ಯಾಸಕ್ಕೆ ಕಾರಣ ವಾಕ್ಯದಲ್ಲಿ ನಡೆಸಬೇಕಾಗಿರುವ ಕೆಲಸಗಳು ಬೇರೆ ಬೇರೆಯಾಗಿರುವುದೇ.

ನಾಮಪದಗಳು ಸಾಮಾನ್ಯವಾಗಿ ವ್ಯಕ್ತಿ, ವಸ್ತು, ಸ್ಥಳವನ್ನು ಮೊದಲಾದುವನ್ನು ಗುರುತಿಸಬೇಕಾಗಿದೆಯಾದ್ದರಿಂದ ಅವುಗಳನ್ನು ಹೆಸರಿಸುವುದು ವರ್ಣಿಸುವುದು ಎಂದು ಎರಡು ರೀತಿಯಲ್ಲಿ ಬಳಸಬಹುದು ಅವನ್ನ ನೇರವಾಗಿ ಬಳಸಿದಾಗಲೆಲ್ಲ ಅವು ಹೆಸರನ್ನು ಸೂಚಿಸುವ ಮತ್ತು ಪದಗುಚ್ಛಗಳ ರೂಪದಲ್ಲಿ ಬಳಸಿದಾಗ ವರ್ಣಿಸುವ ಕೆಲಸವನ್ನೂ ನಡೆಸುತ್ತದೆಯೆಂದು ತಿಳಿಯಬಹುದು ಕ್ರಿಯಾಪದಗಳೊಂದಿಗೆ ಇತರ ಕ್ರಿಯಾಪದಗಳನ್ನು ಸೇರಿಸಿ ಕೂಡುಪದಗಳನ್ನು ತಯಾರಿಸುವ ರೀತಿಯೊಂದು ಕನ್ನಡ ಭಾಷೆಯಲ್ಲಿ ಬಳಕೆಯಲ್ಲಿದೆ. ಕ್ರಿಯಾಪದಗಳಿಗೆ ಕೆಲವೊಮ್ಮೆ ನಾಮಪದ, ಗುಣಪದ, ಸೇರಿಯೂ ಕೂಡುಪದಗಳು ಉಂಟಾಗುತ್ತದೆ.

**ಉದಾ :** ಹಾಳಾಗು, ಬೇರೆಬಿಡು, ಮಾತುಕೊಡು, ಕಂಡುಬರು, ಅಡ್ಡಬೀಳು ಇತ್ಯಾದಿ

ಗುಣಪದಗಳು ನಾಮಪದ ಮತ್ತು ಕ್ರಿಯಾ ಪದಗಳಲ್ಲಿ ಬರುವ ವಿಧಾನ ಹಾಗೂ ತೆಗೆದುಕೊಳ್ಳುವ ಪ್ರತ್ಯಯಗಳು ಹಾಗೂ ಸೂಚಿಸುವ ಅರ್ಥಗಳು ಭಿನ್ನವಾಗಿರುತ್ತದೆ. ಕನ್ನಡದಲ್ಲಿ ಮುಖ್ಯವಾಗಿ ಎರಡು ರೀತಿಯ ಗುಣ ಪದಗಳನ್ನು ಬಳಸುತ್ತೇವೆ ಕೆಲವೊಮ್ಮೆ ನಾಮಪದಗಳೊಂದಿಗೂ ಮತ್ತೊಮ್ಮೆ ಕ್ರಿಯಾಪದಗಳೊಂದಿಗೂ ಬರುತ್ತದೆ

**ಉದಾ :** ಉದ್ದ, ಬಿಳಿ

ಕನ್ನಡದಲ್ಲಿ ಸಂಸ್ಕೃತ, ಇಂಗ್ಲೀಷ್, ಹಿಂದಿ, ಪರ್ಶಿಯನ್, ಮೊದಲಾದ ಬೇರೆ ಬೇರೆ ಭಾಷೆಗಳಿಂದ ಎರವಲು ಪಡೆದಿರುವ ಪದಗಳೂ ಇವೆ ಪ್ರತಿಯೊಂದು ಭಾಷೆಯೂ ಇತರ ಭಾಷೆಗಳಿಂದ ಎರವಲು ಪದಗಳನ್ನು ಪಡದೇ ಇರುತ್ತದೆ ಕೆಲವು ಭಾಷೆಗಳಲ್ಲಿ ಇಂತಹ ಪದಗಳು ಅಧಿಕವಾಗಿರುತ್ತದೆ ಪದಗಳನ್ನು ಎರವಲು ಕೊಡುವ ಭಾಷೆಗೂ ಎರವಲಾಗಿ ಪಡೆಯುವ ಭಾಷೆಗೂ ನಡುವೆ ಬಹಳ ಹತ್ತಿರ ಸಂಪರ್ಕವಿದೆ ಆದ್ದರಿಂದ ಎರವಲು ಕೊಡುವ ಭಾಷೆಯೂ ಪ್ರತಿಷ್ಠೆಯಿಂದ ಕೂಡಿದ್ದರೆ ಎರವಲು ಪಡೆಯುವ ಭಾಷೆಯೂ ಅಧಿಕ-ಅಧಿಕ ಪದಗಳನ್ನು ಪಡೆದು ತನ್ನ ಭಾಷೆಯಲ್ಲಿ ಸೇರಿಸಿಕೊಳ್ಳುತ್ತದೆ ಹಾಗೆಯೇ ಕನ್ನಡದ ಮಟ್ಟಿಗೆ ಸಂಸ್ಕೃತ ಬಹಳ ಪ್ರತಿಷ್ಠೆಯ

ಭಾಷೆಯಾಗುವುದರಿಂದ ಹೆಚ್ಚು ಹೆಚ್ಚು ಸಂಸ್ಕೃತ ಪದಗಳು ಕನ್ನಡ ಭಾಷೆಯಲ್ಲಿ ಸೇರಿಕೊಂಡಿರುವುದನ್ನು ನಾವು ನೋಡಿದ್ದೇವೆ.

**ವಾಕ್ಯವೆಂದರೆ ಪದಗಳ ಸಮೂಹವಲ್ಲ ಬದಲಾಗಿ ವಾಕ್ಯವೂ ಕ್ರಮಬದ್ಧವಾದ ಹಾಗೂ ಅರ್ಥಬದ್ಧವಾದ ಹಾಗೂ ಸಂರಚನೆಯಿಂದ ಕೂಡಿದ ಪದಗಳ ಸಮೂಹ ಎನ್ನಬಹುದು.** ಕೆಲವೊಂದು ವಿಶೇಷವಾದ ಸಂದರ್ಭವನ್ನೂ ಹೊರತು ಪಡಿಸಿ ವಾಕ್ಯವೊಂದರಲ್ಲಿ ವಿಷಯವೊಂದರ ಇರುವಿಕೆ ಅಥವಾ ಸ್ಥಿತಿಯನ್ನು ಹೇಳುತ್ತದೆ ಹಾಗೂ ಕ್ರಿಯಾಪದಗಳು ಮುಖ್ಯವಾಗಿ ಘಟನೆಯನ್ನು ವಿವರಿಸುತ್ತದೆ ಪ್ರತಿ ನಿತ್ಯದ ನಾವು ನಮ್ಮ ಮಾತಿನಲ್ಲಿ ಯಾವುದಾದರೂ ವಿಷಯಗಳ ಕುರಿತು ಅಂದರೆ ಘಟನೆ, ಅನಿಸಿಕೆ, ಇವುಗಳನ್ನು ಪ್ರಸ್ತಾಪಿಸುತ್ತೇವೆ. ಇವುಗಳನ್ನು ವಾಕ್ಯಗಳ ಮೂಲಕ ಅಭಿವ್ಯಕ್ತಗೊಳಿಸುತ್ತೇವೆ. ಕ್ರಿಯಾಪದಗಳು ಲಿಂಗ, ಪುರುಷ, ವಚನಬೇಧವನ್ನು ತಿಳಿಸುವಂತೆ ಬಳಕೆಯಾಗುತ್ತದೆ.

ವಾಕ್ಯಗಳಲ್ಲಿ ಪ್ರಯೋಗವಾಗುವ ಕ್ರಿಯಾ ವಾಕ್ಯಗಳು, ವಿಷಯ ವಾಕ್ಯಗಳ ಬಳಕೆಯನ್ನು ಉದಾಹರಣೆ ಸಹಿತ ವಿವರಿಸಿದ್ದಾರೆ ಒಳವಾಕ್ಯಗಳು, ವಿಭಕ್ತಿ ಪ್ರತ್ಯಯಗಳು, ವಾಕ್ಯಗಳ ಜೋಡಣೆ, ವಾಕ್ಯ ಘಟಕಗಳು ಹಾಗೂ ಗುಣಪದಗಳು, ಸಂಬಂಧ ವಾಕ್ಯಗಳ ಇರುವಿಕೆಯ ವಾಕ್ಯದೊಂದಿಗಿನ ಸಂಬಂಧವನ್ನು ವೈಜ್ಞಾನಿಕ ಅಂಶಗಳು ಆಧಾರದ ಮೇಲೆ ವಿವರಿಸಿದ್ದಾರೆ.

ಒಂದು ವಾಕ್ಯವೂ ಪೂರ್ಣಾರ್ಥವನ್ನು ನೀಡುತ್ತದೆ ಎಂಬುದು ಸಹ ಅಸ್ಪಷ್ಟವಾದ ಸಂಗತಿಯಾಗಿರುತ್ತದೆ ಈ ಕ್ರಿಯಾರ್ಥಕ ವಾಕ್ಯಗಳು ವೈಷಯಿಕ ವಾಕ್ಯಗಳಿಕ್ಕಿಂತ ಹೆಚ್ಚು ವೈವಿಧ್ಯದಿಂದ ಕೂಡಿರುತ್ತದೆ. ಡಿ.ಎನ್.ಶಂಕರಭಟ್ಟರ ಪ್ರಕಾರ ಕನ್ನಡ ವರ್ಣಮಾಲೆಯಲ್ಲಿ ಬಳಸುತ್ತಿರುವ ೩೨ ಅಕ್ಷರಗಳು ಮಾತಿನ ಧ್ವನಿಗಳಾಗಿದೆ. ಒಂದು ಅಂದರೆ ಬಿಂದುವಿಂದ ಕೂಡಿದ ಅಕ್ಷರ ಉದಾ :- ಮಂದಿರ, ಬಿಂದಿಗೆ ಇವುಗಳು ಉಚ್ಚಾರಣೆಯ ಧ್ವನಿಗಳಲ್ಲ ಬದಲಿಗೆ ಲಿಪಿಯ ಆಕಾರಗಳಾಗಿವೆ ಎಂದು ಡಿ.ಎನ್.ಶಂಕರಭಟ್ಟರ ಅಭಿಪ್ರಾಯವಾಗಿದೆ.

ಹಾಗೆಯೇ ನಾವು ವಿಜ್ಞಾನ ಎಂಬ ಪದವನ್ನು ಗಮನಿಸಿದಾಗ ಅವುಗಳಲ್ಲಿ ಬರುವ **ಜ,** ಞ, ಎರಡು ಅನುನಾಸಿಕ ಅಕ್ಷರಗಳು ಕನ್ನಡಿಗರ ಉಚ್ಚರಣೆಯಲ್ಲಿ ಇಲ್ಲ ಆದರೆ ಇದು ಸಂಸ್ಕೃತದಲ್ಲಿ ಇದೆ ಇದನ್ನು ಅವರು ಬಿಟ್ಟಿದ್ದಾರೆ ಹಾಗೂ **ಋ, ಐ, ಔ,**

ಅಂ, ಅಃ ಹಾಗೂ ಖ, ಘ, ಛ, ಝ, ಠ, ಢ, ಥ, ಧ, ಫ, ಭ, ಷ, ಅಕ್ಷರಗಳನ್ನು ಬಿಟ್ಟಿರುವುದನ್ನು ನಾವು ಕಾಣಬಹುದು ಒಟ್ಟಾರೆಯಾಗಿ ಡಿ.ಎನ್.ಶಂಕರಭಟ್ಟರು ಬಳಸುತ್ತಿರುವ ವರ್ಣಮಾಲೆಯ ಮಾದರಿಯೂ ಈ ಕೆಳಕಂಡಂತೆ ಇದೆ.

ಅ ಆ ಇ ಈ ಉ ಊ ಎ ಏ ಒ ಓ

ಕ ಗ

ಚ ಜ

ಟ ಡ ಣ

ತ ದ ನ

ಪ, ಬ, ಮ

ಯ, ರ, ಲ, ವ, ಶ, ಸ, ಹ, ಳ – ಒಟ್ಟು

೩೧

ಅಕ್ಷರಗಳು ಹಾಗೂ ಬಿಂದು ಸಹಿತ ಅಂದರೆ "೦" ಅನುಸ್ವಾರ ಸೇರಿ ೩೨ ಅಕ್ಷರಗಳು. ಅಂದರೆ ಸ್ವರಗಳು–೧೦ ಹಾಗೂ ವ್ಯಂಜನಗಳು–೧೫ ಹಾಗೂ ಅವರ್ಗೀಯ ವ್ಯಂಜನಗಳು–೦೮ ಹೀಗೆ ಒಟ್ಟಾರೆ ೩೨ ಅಕ್ಷರಗಳನ್ನು ಬಳಸಿ ಕನ್ನಡ ಭಾಷೆಯ

ಲಿಪಿಯನ್ನು ಎಲ್ಲರಿಗೂ ಸುಲಭವಾಗುವಂತೆ ಭಾಷೆಯನ್ನು ವೈಜ್ಞಾನಿಕವಾಗಿ ಮಿತಿಗೊಳಿಸುವ ಪ್ರಯತ್ನವನ್ನು ಡಿ.ಎನ್.ಶಂಕರಭಟ್ಟರು ಮಾಡುತ್ತಿದ್ದಾರೆ.

ಅಡಿ ಟಿಪ್ಪಣಿ:

- ಕನ್ನಡದಲ್ಲೇ ಹೊಸಪದಗಳನ್ನು ಕಟ್ಟುವ ಬಗೆ, ಡಿ.ಎನ್.ಶಂಕರಭಟ್ಟ, ಪ್ರಕಾಶಕರು, ಮುಂಗವಳ್ಳಿ, ಭೀಮನಕೋಣೆ, ಸಾಗರ-೨೦೧೪. ಪು-೬೭
- ಕನ್ನಡ ಬರಹವನ್ನು ಸರಿಪಡಿಸೋಣ, ಡಿ.ಎನ್.ಶಂಕರಭಟ್ಟ, ಪ್ರಕಾಶಕರು ಭಾಷಾ ಪ್ರಕಾಶನ, ಹೆಗ್ಗೋಡು, ಸಾಗರ-೨೦೦೬. ಪು-೨೪
- ಅದೇ ಪು- ೨೭
- ಕನ್ನಡ ವಾಕ್ಯಗಳ ಒಳರಚನೆ, ಡಿ.ಎನ್.ಶಂಕರಭಟ್, ಪ್ರಕಾಶಕರು :-ಭಾಷಾ ಪ್ರಕಾಶನ, ರೂಪಾನಗರ, ಮೈಸೂರು -೨೦೦೪.ಪು-೬೭
- ಕನ್ನಡ ಪದಗಳ ಒಳರಚನೆ, ಡಿ.ಎನ್.ಶಂಕರಭಟ್ಪ್ರಕಾಶಕರು - ಭಾಷಾ ಪ್ರಕಾಶನ ಗಡಿಕಲ್ಲು ಕೊಪ್ಪ -೧೯೯೯ . ಪು-೧೯೭

# ಅಧ್ಯಾಯ –೫

# ಸಮಾರೋಪ

ಪ್ರಪಂಚದಲ್ಲಿರುವ ಜನರೆಲ್ಲಾ ಒಂದೇ ಭಾಷೆಯನ್ನಾಡುತ್ತಿದ್ದಿದ್ದರೆ ಭಾಷಿಕ ಸಮುದಾಯದವರು ಕೆಲವರಿದ್ದಾರೆ ಹೀಗಿದ್ದಾಗ ಜಗತ್ತಿನ ಬೇರೆ ಬೇರೆ ಭಾಷೆಯನ್ನು ಕಲಿಯುವ ಕೆಲಸವೂ ಇಲ್ಲವಾಗುತ್ತಿತ್ತು ಇದರಿಂದ ಭಾಷೆಯ ಹೆಸರಿನಲ್ಲಿ ನಡೆಯುವ ಹೋರಾಟಗಳನ್ನು ನಿಲ್ಲಿಸಬಹುದು ಆದರೆ ಎಲ್ಲವೂ ಏಕರೂಪತೆಯನ್ನು ಪಡೆದರೆ ಸಮಾಜದಲ್ಲಿ ನಡೆಯುವ ಮೇಲು-ಕೀಳು ಎಂಬ ಭಾವನೆ ತೊಲಗಿಸಬಹುದು.

ಪ್ರತಿಯೊಂದು ಮಾನವನ ತನ್ನ ಭಾವನೆ ಹಾಗೂ ಅನಿಸಿಕೆಯನ್ನು ವ್ಯಕ್ತಪಡಿಸಲು ಮನುಷ್ಯ ಮಾತನ್ನು ಮಾಧ್ಯಮವನ್ನಾಗಿಸಿಕೊಂಡನು. ಭಾಷೆಯೂ ಕಾಲದಿಂದ ಕಾಲಕ್ಕೆ ಬದಲಾವಣೆಗೆ ಒಳಗಾಗುತ್ತಲೇ ಇರುತ್ತದೆ ಇದರಿಂದ ಎಲ್ಲಾ ಸಂದರ್ಭದಲ್ಲೂ ಭಾಷೆಯೂ ಇನ್ನೊಂದು ಭಾಷೆಯ ಸಂಪರ್ಕವನ್ನು ಪಡೆದು ಹಲವಾರು ಹೊಸತನವನ್ನು ಪಡೆಯುತ್ತವೆ ಇದರಿಂದ ಹೊಸದಾಗಿ ಹೊಸ ಕಾಲಕ್ಕೆ ಹೊಂದಿಕೊಳ್ಳದ ಜೀವಿಗಳು ಅಸಮರ್ಥವಾಗಿ ನಾಶಗೊಳ್ಳುತ್ತದೆ ಇದರಿಂದ ಯಾವ ಜೀವಿಯೂ ಸಾಮರ್ಥ್ಯವನ್ನು ಪಡೆಯಲು ಪ್ರಯತ್ನಿಸುವುದಿಲ್ಲ ಹಾಗೆಯೇ ಭಾಷೆಯಲ್ಲಿ ಕಾಣಿಸುವ ವೈವಿಧ್ಯತೆಯೂ ಇದೇ ರೀತಿಯದು ನಮ್ಮ ಜೀವನದಲ್ಲಿ ಕಾಣಿಸುವ ಇತರ ವೈವಿಧ್ಯತೆಗಳಂತೆಯೇ ಅದೂ ಅತ್ಯವಶ್ಯಕವಾದುದು ಒಂದು ಭಾಷೆಯೂ ತಿಳಿಯಲು ಅದರಲ್ಲಿ ಕಾಣಿಸುವ ವೈವಿಧ್ಯತೆಯ ಮೇಲೆ ಅವಲಂಭಿಸಿರುತ್ತದೆ.

ಭಾಷಾ ವಿಜ್ಞಾನದ ನೆಲೆಯಲ್ಲಿ ಭಾಷೆಯ ರಚನೆ ಮತ್ತು ಬಳಕೆಯಲ್ಲಿಯೇ ಶುದ್ಧ – ಅಶುದ್ಧದ ದೃಷ್ಟಿಕೋನವಿಲ್ಲ ಭಾಷಾವಿಜ್ಞಾನಿಗಳು ಭಾಷಿಕ ಬದಲಾವಣೆಯ ಎಲ್ಲ ಬಗೆಗಳನ್ನು ಗಮನಿಸಿ ವಿಂಗಡಿಸಿ ವಿಶ್ಲೇಷಣೆ ಮಾಡುತ್ತಾರೆಯೋ ಹೊರತು ಯಾವುದೇ ಒಂದು ಬಗೆಯ ಬದಲಾವಣೆಯನ್ನು ಕಲುಷಿತವೆಂದು ಅಥವಾ ದೂಷಣೆಯೆಂದು ನಿರ್ಧರಿಸುವುದಿಲ್ಲ. ಪ್ರತಿಯೊಂದು ಭಾಷೆಗೂ ಅದರದೇ ಆದ ವ್ಯಾಕರಣ

ಪರಂಪರೆಯೊಂದು ಬೆಳೆದು ಬರುವ ಅವಶ್ಯಕತೆಯಿದೆ ಇಲ್ಲವಾದರೆ ಅದರ ವ್ಯಾಕರಣದ

ಮೇಲೆ ಬರೆದ ಬರಹಗಳು ಆ ಭಾಷೆಯ ಮೂಲ ಸೂತ್ರಗಳನ್ನು ಪ್ರತಿಬಿಂಬಿಸುವ ಬದಲು ಬೇರೆ ಭಾಷೆಯ ಮೂಲಸೂತ್ರಗಳನ್ನು ಅದರ ಮೇಲೆ ಹೇರುವಂತಾಗುತ್ತದೆ. ಇಂತಹ ಮೂಲಸೂತ್ರಗಳನ್ನು ಅದರ ಮೇಲೆ ಹೇರುವಂತಾಗುತ್ತದೆ.

ಮೂಲಸೂತ್ರಗಳು ಬೇರೊಂದು ಭಾಷಾ ಕುಟುಂಬಕ್ಕೆ ಸೇರಿರುವ ಭಾಷೆಯಾಗಿದ್ದರೆ ಅವುಗಳಿಂದಾಗುವ ತೊಂದರೆ ಇನ್ನೂ ಹೆಚ್ಚಾಗಿರುತ್ತದೆ. ಕನ್ನಡ ವ್ಯಾಕರಣದ ಮೇಲೆ ಬರೆದ ಬರಹಗಳಲ್ಲಿ ಹೆಚ್ಚಿನವೂ ಇಂತಹ ತೊಂದರೆಗೆ ಸಿಲುಕಿಕೊಂಡಿವೆ, ಸಂಸ್ಕೃತ ಭಾಷೆಯ ವ್ಯಾಕರಣ ಪರಂಪರೆಯಿಂದ ಪ್ರಭಾವಿತವಾಗಿರುವುದೇ ಇದಕ್ಕೆ ಕಾರಣ ಸಂಸ್ಕೃತ ಭಾಷೆ ಇಂಡೋ–ಆರ್ಯನ್ ಎಂಬ ಭಾಷಾ ವರ್ಗಕ್ಕೆ ಸೇರಿದೆ ಆದರೆ ಕನ್ನಡ ಇದಕ್ಕಿಂತ ತೀರ ಭಿನ್ನವಾಗಿರುವ ದ್ರಾವಿಡ ಭಾಷಾ ವರ್ಗಕ್ಕೆ ಸೇರಿರುವ ಭಾಷೆಯಾಗಿದೆ.

ಸಂಸ್ಕೃತ ವ್ಯಾಕರಣ ಪರಂಪರೆಯಲ್ಲಿ ಬರೆದಿರುವ ಈ ಬರಹಗಳೆಲ್ಲ ಕನ್ನಡ ವ್ಯಾಕರಣದ ನಿಜಸ್ವರೂಪವನ್ನು ತಿಳಿಸಿ ಹೇಳುವಲ್ಲಿ ಬಹಳ ಮಟ್ಟಿಗೆ ಅಸಮರ್ಥವಾಗಿದೆ. ಮನುಷ್ಯರು ಪ್ರಾಣಿಗಳಿಂದ ಭಿನ್ನವಾದ ವ್ಯಕ್ತಿಗಳಾಗಿ ವಿಕಾಸಗೊಂಡಾಗ ಅವರೊಂದಿಗೆ ಅವರ ಭಾಷೆಯೂ ವಿಕಾಸಗೊಂಡಿರಬೇಕು ಮತ್ತು ಮನುಷ್ಯರು ಅನಂತರ ಬೇರೆ ಬೇರೆ ಸಮಾಜಗಳಾಗಿ ವಿಭಜಿತರಾದಾಗ ಇದರೊಂದಿಗೆ ಅವರಾಡುವ ಭಾಷೆಯೂ ಬೇರೆ ಬೇರೆ ಭಾಷೆಗಳಾಗಿ ವಿಭಜಿತವಾಗಿರಬೇಕು ಹಾಗಾಗಿ ಮಾನವರೆಲ್ಲರ ನಡುವೆಯೂ ಸಾಮ್ಯವಿದ್ದೇ ಇರಬೇಕು. ಈ ಕಾರಣಕ್ಕಾಗಿ ಕನ್ನಡ, ಸಂಸ್ಕೃತ, ಲ್ಯಾಟಿನ್, ಇಂಗ್ಲೀಷ್ ಮಾತ್ರವಲ್ಲದೆ ಜಗತ್ತಿನಲ್ಲಿರುವ ಇತರ ಸಾವಿರಾರು ಭಾಷೆಗಳ ನಡುವೆಯೂ ಬೇರೆ ಬೇರೆ ರೀತಿಯ ಸಾಮ್ಯಗಳನ್ನು ಕಾಣಲು ಸಾಧ್ಯವಿದೆ. ಇಂತಹ ಸಾಮ್ಯಗಳ ಆಧಾರದ ಮೇಲೆ ಈ ಎಲ್ಲಾ ಸಾವಿರಾರು ಭಾಷೆಗಳಿಗೂ ಅನ್ವಯಿಸುವಂತಹ ವ್ಯಾಕರಣ ಪರಂಪರೆಯೊಂದನ್ನು ಕಲ್ಪಿಸಿಕೊಳ್ಳಲು ಸಾಧ್ಯವಿದೆ ಇಂತಹ ವ್ಯಾಕರಣ ಪರಂಪರೆಯನ್ನು ಕಲ್ಪಿಸಿಕೊಳ್ಳುವ ಪ್ರಯತ್ನ ಈಗ ಹಲವು ದಶಕಗಳಿಂದಲೂ ನಡೆಯುತ್ತಾ ಇದೆ. ಆದರೆ ಈ ಭಾಷೆಗಳೊಳಗೆ ಸಾಮ್ಯ ಮಾತ್ರವಲ್ಲದೆ ವ್ಯತ್ಯಾಸವೂ ಇದೆಯಾದ ಕಾರಣ, ಅವುಗಳ ನಡುವಿರುವ ಸಾಮ್ಯವನ್ನು ಪ್ರತಿನಿಧೀಕರಿಸುವ ವ್ಯಾಕರಣ ಪರಂಪರೆ ಮಾತ್ರವಲ್ಲದೆ ವ್ಯತ್ಯಾಸವನ್ನು ತೋರಿಸಿಕೊಡುವ ವ್ಯಾಕರಣ ಪರಂಪರೆಯೂ ಅತ್ಯವಶ್ಯಕವಾಗಿದೆ.

ಒಟ್ಟಾರೆಯಾಗಿ ಯಾವ ಭಾಷೆಯು ಮೇಲಲ್ಲ. ಯಾವ ಭಾಷೆಯು ಕೀಳಲ್ಲ. ಪ್ರತಿಯೊಂದು ಭಾಷೆಯು ತನ್ನದೇ ಆದ ಭಾಷಾ ಪರಂಪರೆಯನ್ನೂ, ವಿಶಿಷ್ಟವನ್ನು ಒಳಗೊಂಡಿರುತ್ತದೆ. ಯಾವ ಭಾಷೆಯು ಯಾವ ಭಾಷೆಯ ಪ್ರಭಾವಕ್ಕೆ ಒಳಗಾಗಿದ್ದರೂ, ಆ ಭಾಷೆಯ ಸಹಜ ಸ್ವರೂಪತೆಯಲ್ಲಿ ಬದಲಾವಣೆಯಾಗುವುದಿಲ್ಲ. ಸಹಜ ಸ್ವಾಭಾವಿಕತೆಯು ಹಾಗೆಯೇ ಉಳಿದಿರುತ್ತದೆ ಎಂಬುದನ್ನು ಶೋಧನೆಯಲ್ಲಿ ಕಂಡುಕೊಳ್ಳಲಾಗಿದ್ದು, ನಮ್ಮ ಭಾಷೆಯನ್ನು ಉಳಿಸಿ, ಬೆಳೆಸಲು ಸಹಕಾರಿಯಾದುದಾಗಿದೆ.

ಅಡಿ ಟಿಪ್ಪಣಿ:

- ಕನ್ನಡದಲ್ಲೇ ಹೊಸಪದಗಳನ್ನು ಕಟ್ಟುವ ಬಗೆ, ಡಿ.ಎನ್.ಶಂಕರಭಟ್ಟ, ಪ್ರಕಾಶಕರು, ಮುಂಗವಳ್ಳಿ, ಭೀಮನಕೋಣೆ, ಸಾಗರ–೨೦೧೪. ಪು ೬೭
- ಕನ್ನಡ ಬರಹವನ್ನು ಸರಿಪಡಿಸೋಣ, ಡಿ.ಎನ್.ಶಂಕರಭಟ್ಟ, ಪ್ರಕಾಶಕರು ಭಾಷಾ ಪ್ರಕಾಶನ, ಹೆಗ್ಗೋಡು, ಸಾಗರ–೨೦೦೬ ಪು ೨೪, ೨೭
- ಕನ್ನಡ ವಾಕ್ಯಗಳ ಒಳರಚನೆ, ಡಿ.ಎನ್.ಶಂಕರಭಟ್, ಪ್ರಕಾಶಕರು :–ಭಾಷಾ ಪ್ರಕಾಶನ, ರೂಪಾನಗರ, ಮೈಸೂರು –೨೦೦೪. ಪು ೬೬
- ಅಂತರ್ ಜಾಲ ಮಾಹಿತಿ – ಮಿಂಚಂಚೆ, ಹೊನಲು, ಸಂಪದ



## ಪರಾಮರ್ಶನ ಗ್ರಂಥಗಳು


❖ ಕನ್ನಡ ಭಾಷೆಯ ಕಲ್ಪಿತ ಚರಿತ್ರೆ, ಡಿ.ಎನ್.ಶಂಕರಭಟ್
ಪ್ರಕಾಶಕರು :- ಭಾಷಾ ಪ್ರಕಾಶನ

❖ ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ, ಡಿ.ಎನ್.ಶಂಕರಭಟ್
ಪ್ರಕಾಶಕರು : ಭಾಷಾ ಪ್ರಕಾಶನ.
ಕನ್ನಡ ಸಾಹಿತ್ಯ ಕೋಶ –ರಾಜಪ್ಪ ದಳವಾಯಿಪ್ರಕಾಶಕರು :- ದಳವಾಯಿ ಪ್ರಕಾಶನ, ಬೆಂಗಳೂರು ವಿಶ್ವವಿದ್ಯಾಲಯ ೨೦೦೮

❖ ಕನ್ನಡ ಸಾಹಿತ್ಯ ಚರಿತ್ರೆ – ರಂ.ಶ್ರೀ. ಮುಗಳಿಪ್ರಕಾಶಕರು ಗೀತ ಬುಕ್ ಹೌಸ್, ಮೈಸೂರು

❖ ಭಾಷೆಯ ಬಗೆಗೆ ನೀವೇನು ಬಲ್ಲಿರಿ? – ಡಿ.ಎನ್.ಶಂಕರಭಟ್.
ಪ್ರಕಾಶಕರು : ಭಾಷಾ ಪ್ರಕಾಶನ, ಹೆಗ್ಗೋಡು, ಸಾಗರ –೯೯೭೦.

❖ ಕನ್ನಡ ಪದಗಳ ಒಳರಚನೆ, ಡಿ.ಎನ್.ಶಂಕರಭಟ್
ಪ್ರಕಾಶಕರು – ಭಾಷಾ ಪ್ರಕಾಶನ ಗಡಿಕಲ್ಲು ಕೊಪ್ಪ –೧೯೯೯
ಕನ್ನಡದಲ್ಲೇ ಹೊಸಪದಗಳನ್ನು ಕಟ್ಟುವ ಬಗೆ, ಡಿ.ಎನ್.ಶಂಕರಭಟ್ಟ, ಪ್ರಕಾಶಕರು, ಮುಂಗವಳ್ಳಿ, ಭೀಮನಕೋಣೆ, ಸಾಗರ–೨೦೧೪

❖ ಕನ್ನಡ ವಾಕ್ಯಗಳ ಒಳರಚನೆ, ಡಿ.ಎನ್.ಶಂಕರಭಟ್, ಪ್ರಕಾಶಕರು :-ಭಾಷಾ ಪ್ರಕಾಶನ, ರೂಪಾನಗರ, ಮೈಸೂರು –೨೦೦೪.

❖ ಕನ್ನಡ ನುಡಿಯ ಬಗೆಗೆ ಚಿಂತನೆ – ಡಿ.ಎನ್.ಶಂಕರಭಟ್
ಪ್ರಕಾಶಕರು :– "ಸುವರ್ಣ ಕರ್ನಾಟಕ" ಸಂದರ್ಭದಲ್ಲಿ ಕರ್ನಾಟಕ ಸರ್ಕಾರದ ಪರವಾಗಿ ಕೆ.ಆರ್.ನಿರಂಜನ, ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಂದ ಪ್ರಕಟ .–೨೦೦೬.

❖ ಕನ್ನಡ ಬರಹವನ್ನು ಸರಿಪಡಿಸೋಣ, ಡಿ.ಎನ್.ಶಂಕರಭಟ್ಟ, ಪ್ರಕಾಶಕರು ಭಾಷಾ ಪ್ರಕಾಶನ, ಹೆಗ್ಗೋಡು, ಸಾಗರ–೨೦೦೬

❖ ಸಂಶೋಧನಾ ಸ್ವರೂಪ, ಡಾ.ಬಿ.ವಿ.ಶಿರೂರ್, ನಿವೃತ್ತ ಕನ್ನಡ ಪ್ರಾಧ್ಯಾಪಕರು, ಡಾ॥ ಆರ್.ಸಿ.ಹಿರೇಮಠ್, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಪ್ರಕಾಶಕರು : ಅನ್ನಪೂರ್ಣ ಪ್ರಕಾಶನ, ಧಾರವಾಡ –೨೦೦೮.

❖ ಇಂಗ್ಲೀಷ್ ಪದಗಳಿಗೆ ಕನ್ನಡದ್ದೇ ಪದಗಳು – ಡಿ.ಎನ್.ಶಂಕರಭಟ್.
ಪ್ರಕಾಶಕರು : ಭಾಷಾ ಪ್ರಕಾಶನ, ಬಿಲ್ಲೇಶ್ವರ, ಹುಂಚ, ಹೊಸನಗರ –೨೦೦೮.

❖ ಕನ್ನಡ ವ್ಯಾಕರಣ ಯಾಕೆ ಬೇಕು?, ಡಿ.ಎನ್.ಶಂಕರಭಟ್ಟ, ಪ್ರಕಾಶಕರ :– ಭಾಷಾ ಪ್ರಕಾಶನ, ಹೆಗ್ಗೋಡು, ಸಾಗರ –೨೦೦೯.

❖ An Introduction to linguistics . ಡಿ.ಎನ್.ಶಂಕರಭಟ್ಟ

❖ ಮಾತು ಮತ್ತು ಬರಹದ ನಡುವಿನ ಗೊಂದಲ – ಡಿ.ಎನ್.ಶಂಕರಭಟ್
ಪ್ರಕಾಶಕರು :– ಭಾಷಾ ಪ್ರಕಾಶನ, ಆರಗ, ತೀರ್ಥಹಳ್ಳಿ –೨೦೧೧

❖ ಅಂತರ್ ಜಾಲ ಮಾಹಿತಿ – ಮಿಂಚಂಚೆ : ಹೊನಲು, ಸಂಪದ, ಕಣಜ.

